# ಮುನ್ನುಡಿ

'ಸಣ್ಣಕತೆ'ಗಳು 'ಭಾವಗೀತ' ಗಳಿದ್ದಂತೆ ಎಂದು ಹೇಳುವ ಮಾತು ಅವುಗಳ ಜೀವಕ್ಕೆ ಸಂಬಂಧಿಸಿದುದು; ದೇಹಕ್ಕಲ್ಲ. ದೇಹದಲ್ಲಿಯೋ ಒಂದು ಗದ್ಯ ಇನ್ನೊಂದು ಪದ್ಯ; ಒಂದು ಕತೆ, ಇನ್ನೊಂದು ಗೀತ. ಹಾಗೆಯೆ, ಕತೆಯ ಮನೋರಚನೆಯೆ ಬೇರೆ, ಗೀತದ ಮನೋರಚನೆಯೆ ಬೇರೆ. ಮೊದಲನೆಯದು ಬಾಹ್ಯಘಟನೆ ವಿಘಟನೆಗಳನ್ನವಲಂಬಿಸಿದುದು; ಎರಡನೆಯದು ಆಂತರಂಗಿಕ ಲಹರಿತರಂಗಕಲ್ಲೋಲಗಳ ಆಟ. ಕತೆಯು ಎಲುವಿನಂತೆ ಬಿರುಸು, ಗೀತವು ಗಾಳಿಯಂತೆ ತಿಳುವು. ಆದರೂ ಗೀತಗಳ ಭಾವದೊಳಗೂ ಕತೆಗಳ ಸಣ್ಣತನದೊಳಗೂ ಒಂದು ಸಾಮಾನ್ಯ ಜೀವವಿದೆ. ಅದು ಭಾವತಂತು–ಪ್ರಾಣದ ಸಣ್ಣ ಎಳೆ. ಅದುವೆ ಘಟನೆಗಳನ್ನು ಕಟ್ಟಿ ಕತೆಯಾಗುವುದು; ಮನಃಸುಮನಗಳನ್ನು ಪೋಣಿಸಿ ಗೀತವಾಗುವುದು. ಆ ಸಣ್ಣ ದನಿ – ಆ ಭಾವ ಎರಡಕ್ಕೂ ಸಾಮಾನ್ಯವಾಗಿದೆ.

'ಶ್ರೀನಿವಾಸ'ರ 'ಒಂದು ಹಳೆ ಕತೆ' ಯಂತೆ ಕತೆ ದೊಡ್ಡದಿರಲಿ ಅಥವಾ ಅವರದೇ 'ರಂಗಸಾಮಿಯ ಅವಿವೇಕ' ದಂತೆ ಚಿಕ್ಕದಿರಲಿ ಸಣ್ಣದಾಗಿ ಸುಳಿದಾಡುವ ಆ ವಿವೇಕಾವಿವೇಕಗಳ ಸುಳಿಯೇ ಎರಡಕ್ಕೂ ಪ್ರಾಣತಂತು. ಘಟನೆವಿಘಟನೆಗಳ ಪ್ರಪಂಚವು ಏ. ಇದ್ದರೂ ಅವುಗಳನ್ನೆಲ್ಲ ಪೋಣಿಸಿಕೊಂಡು ಬರುವುದು ಒಂದು ಸೂಕ್ಷ್ಮಭಾವ; ಅದರ ಸೂಕ್ಷ್ಮ ಚಾರಿತ್ರ್ಯ. ಆದರೆ ಕತೆಗಳಲ್ಲಿ ಘಟನೆವಿಘಟನೆಗಳಿಗಿಂತ ಈ ಸೂಕ್ಷ್ಮಭಾವದ ಲೀಲಾವಿಲಾಸ ವಿಸ್ತಾರವೇ ಹೆಚ್ಚಾಗುತ್ತ ಹೋದಂತೆ ಸಣ್ಣಕತೆಗಳಿಗೆ ಭಾವಗೀತದ ನೇರುವದು. ರವೀಂದ್ರರ 'ಸುಭಾ' ಅಥವಾ 'ವಿಜಯ

(Victory)' ಇವುಗಳಲ್ಲಿ ಹೀಗಾಗಿದೆ. ಇಂಥವುಗಳಿಗೆ ' ಇದೇನು ? ಕತೆ ಹಾಳಾಗಿ ಕಾವ್ಯವಾಗಿ ಬಿಟ್ಟಿದೆ ' ಎಂದು ಮೂಗು ಮುರಿಯ ಬಹುದಾದರೂ ಈ ವಿಧದ ಕಥನಸರಣಿಯಿಂದ ಕತೆಯ ಸಣ್ಣ ಮೂರ್ತಿಗೆ ಕಾವ್ಯದ ಕೀರ್ತಿಮುಖವನ್ನು ಕಟ್ಟಿದಂತಾಗಿ ಬಂದೇ ಕಳೆಯುಂಟಾಗುವ ಮಾತೂ ಸುಳ್ಳಲ್ಲ. ಈ ಬಗೆಯ ಕಥನ ಸರ ಣಿಯು ಕತೆಗೆ ಜೇಡಬುಡದ ಬಲೆಯ ಆಕಾರವಿಕಾರವನ್ನುಂಟು ಮಾಡುವುದು. ಗಾಳಿಯು ಸರಗಳಂತೆ ಹಬ್ಬಿ ಕಣ್ಣಿಗೆ ಕಾಣದಂತಿ ದ್ದರೂ ತನ್ನ ಜಾಲದಲ್ಲಿ ನೊರಜುನೊಣಗಳನ್ನು ಜೇಡನ ಬಲೆಯು ಹಿಡಿಯುವಂತೆ, ಭಾವಲಹರಿಗಳಂತಿರುವ ಕಥೆಗಳು ತಮ್ಮ ಸಂಪರ್ಕ ದಲ್ಲಿ ಬಂದ ಮನಗಳು ಹೇಗೆ ನುಸುಳುವೆವೆಂದರೂ ಅವುಗಳನ್ನಂಟದೆ ಬಿಡುವದಿಲ್ಲ. ಕಥೆಯೊಳಗಿನ ಭಾವವು ಒಬ್ಬ ಹುಚ್ಚಿಯ ಹಾಳು ಕನಸಿರಲಿ, ಒಬ್ಬ ಜಾಣನ ಮಹತ್ತ್ವದ ತೊಡಕಿರಲಿ ಓದುವವನಿಗೆ ಆ ವ್ಯಥೆಯ, ಆ ಆನಂದದ, ಅನುಭವವು ಸೋಂಕದೆ ಹೋಗುವದಿಲ್ಲ.

ಸಣ್ಣಕತೆಯು ಅಲ್ಪ ಜೀವಿಗಳ ಮಹಾಕಾವ್ಯ. ಮಹಾತ್ಮರ ಜೀವನವೂ ಮಹತ್ತರವಾದ ಜೀವನವೂ ತನ್ನ ಆವಿರ್ಭಾವಕ್ಕೆ ವಿಶಾಲ ವಾದ ಅವಕಾಶವನ್ನು ಬೇಡುವುದು. ಅಲ್ಪ ಜೀವಿಗಳ ಅಲ್ಪ ಜೀವ ನವೋ ಸಂಧಿಯಲ್ಲಿಯೂ ಸಮಾರಾಧನೆಯನ್ನು ತೀರಿಸಿಕೊಳ್ಳುವದು. ಹಳ್ಳಿಯವನು ಪಟ್ಟಣದಲ್ಲಿ ದಿಕ್ಕುಗೆಡುವಂತೆ ಸಾರಹೀನವಾದ ಅಲ್ಪ ಜೀವನಕ್ಕೆ ವಿಸ್ತಾರವೇ ವಿನಾಶದಂತೆ ಪರಿಣಮಿಸುವದು. ಸಾಮಾ ನ್ಯವಾಗಿ ಎಲ್ಲರ ಜೀವನದಲ್ಲಿ ಬಂಗಾರದ ಕಣಗಳು ಕಡಿಮೆ, ಉಸು ಬಿನ ವಿಸ್ತಾರವು ಹೆಚ್ಚು. ಮಹಾಕಾವ್ಯಗಳೂ, ಇತಿಹಾಸ ಪುರಾಣ ಗಳೂ, ರಾಮಾಯಣ ಭಾರತಾದಿಗಳೂ ದೇವತೆಗಳ, ಅವತಾರಿಗಳ, ರಾಜಮಹಾರಾಜರ ಚರಿತೆಗಳನ್ನು ಪ್ರಕಾಶಗೊಳಿಸುವವು. ಕ್ಷುದ್ರರ, ಅಲ್ಪರ, ಹೀನರ, ದೀನರ, ದುರ್ಬಲರ, ದುರ್ಲಕ್ಷಿತರ, ದುಃ

ಈಷನ್ಮಾತ್ರವಾದ ಆತ್ಮಲೀಲೆಯ ಚಾರಿತ್ರ್ಯಕ್ಕೆ ಸಣ್ಣಕತೆಯು ದೊಡ್ಡ
ಸಾಧನವಾಗಿದೆ. ಮಹಾತ್ಮರೆಂಬುವರ ಚರಿತ್ರೆಯು ಆಮೂಲಾಗ್ರ
ವಾಗಿ ಮಹತ್ತ್ವವುಳ್ಳದ್ದಾಗಿರುವದಿಲ್ಲ. ಅಲ್ಪರ ಚರಿತೆಯನ್ನು ಕೇಳು
ವದೇನು ಎಂದೆನ್ನಲಾಗದು. ಏಕೆಂದರೆ ಎಂಥ ಅಲ್ಪನೂ ' ತಟಿತ್
ಕೋಟಿ । ನಿಭ ಕಾಯ ಜಗನ್ನಾಥ ' ನನ್ನು ಕಂಡಿರದಿದ್ದರೂ ಚಳಿಗಾಲ
ದೊಳಗಿನ ಆರಲಿರುವ ಕೆಂಡದ ಬೂದಿಯೊಳಗಿನ ಕಿಡಿಯಷ್ಟಾದರೂ
ಆತ್ಮನ ಪ್ರಕಾಶವನ್ನು ಕಾಣದೆ ಇಲ್ಲ. ಆ ದರ್ಶನವನ್ನು ಚಿತ್ರಿಸುವ
ವರ್ಣಿಸುವ ಮಹಾಕಾರ್ಯವು ಸಣ್ಣಕತೆಗಳ ಪಾಲಿಗೆ ಬಂದಿದೆ.
ಅಕಸ್ಮಾತ್ತಾದ ಆತ್ಮದರ್ಶನದಂತೆ, ಅಕಲ್ಪಿತ ಅಧಃಪತನವೂ ವಿಚಾರ
ಣೀಯವಾಗಿದೆ. ಅದೂ ಸಣ್ಣಕತೆಯ ವಸ್ತು. ದೊಡ್ಡ ಕತೆಗಿಂತಲೂ
ದೊಡ್ಡದಾಗಲು ಸಣ್ಣಕತೆಗೆ ಇಲ್ಲಿ ಅವಸರವಿದೆ. ' ವಸುಮತಿ
ಅಥವಾ ಪರಕಾಯ ಪ್ರವೇಶ' ಮತ್ತು ' ಇನ್ನೊಂದು ಹಳೆಯ ಕತೆ'
ಗಳ ದೊಡ್ಡಸ್ತಿಕೆಯು ಸಣ್ಣ ಕತೆಯ ರಾಜಮಾರ್ಗದೊಳಗಿನ ಒಂದು
ಕೈಗಂಬ. ರವೀಂದ್ರರ ಕಥಾಮಾರ್ಗವು ಪ್ರತ್ಯಕ್ಷ ರಾಜವೀಥಿ.

ಗುಣವನ್ನು ಗುರುತಿಸುವ ಶಕ್ತಿಯು ಸ್ಥಿರವಾಗಿ ಬೆಳೆದಂತೆ
ಪರಗತ ಸುಖದುಃಖಗಳಿಗೆ ಅಂತಃಕರಣವು ಅನುಕೂಲವಾಗಿ ಸತ್ತ್ವವು
ಪ್ರಬಲವಾದಂತೆ ಅಲ್ಪರಲ್ಲಿಯೂ ನಡೆದ ಆತ್ಮನ ವಿರಾಟನಾಟ್ಯವೂ
ಮನಸಿಗೆ ಗೋಚರವಾಗುವದು. ಅದರ ಪರಿಚಯವು ಹೆಚ್ಚಾದಂತೆ
ಅದನ್ನು ಬಣ್ಣಿಸುವ ಕೌಶಲ್ಯವು ಅಧಿಕವಾಗುವದು. ಅಲ್ಲಿಯವರೆಗೆ
ಸಣ್ಣಕತೆಯು ಕಿರಿದಾಗಿ ಕೀಳಾಗಿ ಜೋಳುಗತೆಯೂ ಆಗಬಹುದು.
ದೊಡ್ಡದಾಗಲಾರದೆ ಸಣ್ಣದಾಗಿ ಬಡವಾಗಿ ಸೀಳುಗತೆಯೂ ಆಗ
ಬಹುದು. ಹೆಸರಿನ ಪ್ರಭಾವವು ಮಿಗಿಲಾಗಿ ಸಣ್ಣಕತೆಯು ಕಿರು
ಕುಳ ರಂಜನೆಯಲ್ಲಿ ಈಸಾಡಬಹುದು; ಮುಳುಗಾಡಬಹುದು. ಸಣ್ಣ
ಕತೆಯಿಂದ ನಾವು ಬೇಡುವ ತೃಪ್ತಿಯು ಮಳೆಬಿಟ್ಟು ಮಂಜಿನ ಸೀರಿ

ಗಾಶಿಸಿದಂತೆ ತೋರಬಹುದು. ಹಾಗೆ ನೀರಡಿಕೆಯನ್ನು ತೀರಿಸಿಕೊಳ್ಳುವ ಚಾಪಲ್ಯದಲ್ಲಿ ನಾವು **ಬಿಸಿಲುಗುದುರೆ**ಯ ಬೆನ್ನು ಹತ್ತಬೇಕಾಗಬಹುದು. ಪುತ್ತ್ರೇತರ ಬೆನ್ನು ಹತ್ತಿದರೂ ಸರಿಯೇ—ಸಣ್ಣಕತೆಯ ಮಾನಸಸರೋವರದ ದರ್ಶನವಾದರಾಯಿತು. ಸಣ್ಣಕತೆಗಾರರು ಅತ್ತ ಹೊರಟಿದ್ದಾರೆ. ಶಿವಾಸ್ತೇ ಪಂಥಾಃ !

**—ದ. ರಾ. ಬೇಂದ್ರೆ**



# ಎರಡು ನುಡಿ

ನಮ್ಮ ಜಯಕರ್ನಾಟಕ ಗ್ರಂಥಮಾಲೆಯ ನಾಲ್ಕನೆಯ ಹೂವಾದ ' ಗರತಿಯ ಹಾಡು ' ಪ್ರಸಿದ್ಧವಾದ ಒಂದು ತಿಂಗಳೊಳಗಾಗಿಯೇ ' ಬಿಸಿಲುಗುದುರೆ ' ಎಂಬ ಐದನೆಯ ಹೂವನ್ನು ನಮ್ಮ ವಾಚಕರಿಗೆ ಅರ್ಪಿಸಲು ಸಂತೋಷವಾಗುತ್ತದೆ. ಇದರಂತೆ ೬ ನೆಯ ಹೂವನ್ನೂ ಬೇಗನೆ ಪ್ರಕಟಮಾಡಲಿರುವೆವು.

ಈ ಪುಸ್ತಕವು ಮೊದಲು ಪ್ರಕಟಿಸಿದ ಮೇರೆಗೆ ಸಣ್ಣಕತೆಗಳ ಸಂಗ್ರಹವಾಗಿದೆ; ಆದರೆ ಪುಸ್ತಕದ ಹೆಸರು ಮಾತ್ರ ಬದಲಾಗಿದೆ. ' ಆ ಹೆಂಗುಸು ಹಾಗು ಕೆಲವು ಕತೆಗಳು ' ಎಂದು ನಾಮಕರಣವಾಗಬೇಕಾಗಿತ್ತು. ಆದರೆ ಒಬ್ಬನೇ ಒಬ್ಬ ಕತೆಗಾರನ ಇದುವರೆಗೆ ಅಚ್ಚಾಗದೆ ಇದ್ದ ಕತೆಗಳನ್ನು ಈ ಕಥಾಪುಸ್ತಕದಲ್ಲಿ ಸೇರಿಸಬೇಕೆಂದು ಹಿತೈಷಿಗಳನೇಕರು ಸೂಚಿಸಿದ್ದರಿಂದಲೂ 'ಆ ಹೆಂಗುಸು' ಎಂಬ ಕತೆಯು ಈಗಾಗಲೆ ಈ ವರ್ಷದ ಚೈತ್ರಮಾಸದ ಜಯಕರ್ನಾಟಕದಲ್ಲಿ ಅಚ್ಚಾದ್ದರಿಂದಲೂ ಈ ಪುಸ್ತಕದ ಹೆಸರನ್ನು ಒದಲಾಯಿಸಬೇಕಾಯಿತು. ಈ ' ಬಿಸಿಲುಗುದುರೆ ' ಯಲ್ಲಿ, ಗೆ। ಕೃಷ್ಣಕುಮಾರರ ಬೇರೆ ಬೇರೆ ೫ ಕತೆಗಳನ್ನು ಸೇರಿಸಲಾಗಿದೆ. ' ಬಿಸಿಲುಗುದ ು

ಎಂದು ಹೆಸರನ್ನೇಕೆ ಇಟ್ಟಿರಬಹುದೆಂಬುದು ಗ। ಬೇಂದ್ರೆಯವರ ಮುನ್ನುಡಿಯಲ್ಲಿ ಧ್ವನಿತವಾಗಿಯೇ ಇದೆ.

ಈ ಕಥಾಸಮುಚ್ಚಯದಲ್ಲಿನ ಒಂದೆರಡು ವಿಶೇಷಗಳನ್ನು ಹೇಳಬಹುದು. ‘ತೀರದ ಆಸೆ’ ‘ಮಾಥೂರಾಯನ ಮಂಕು’ ಮತ್ತು ‘ಮುಕ್ತಿಯಾತ್ರೆ’ ಈ ಕತೆಗಳಲ್ಲಿ ಕಥಾವಸ್ತುಗಳನ್ನು ಮತ್ತು ಸನ್ನಿವೇಶವನ್ನು ಆರಿಸುವುದರಲ್ಲಿ ನಾವೀನ್ಯವು ತೋರಿಬರುತ್ತಿದೆ. ಒಂದರಲ್ಲಿ ನೈನಿತಾಲದ ಬಳಿಯ ಹಿಮಾಚಲದ ಉತ್ತುಂಗ ಗಿರಿಶಿಖರಗಳ ದರ್ಶನ; ಇನ್ನೊಂದರಲ್ಲಿ ಒಬ್ಬ ಧ್ಯೇಯವಾದಿಗೆ ಒಬ್ಬ ಕಲಾವತಿಯ ಭೆಟ್ಟಿ ಮಾಡಿಸಿ ದೈವವು ಮಾಡುವ ವಿನೋದ ವಿಲಾಸ; ಮತ್ತಿನ್ನೊಂದರಲ್ಲಿ ಒಬ್ಬ ಹಳ್ಳಿಗಾಡಿನ ಕೋಮಲ ಅಂತಃಕರಣದ ಎಳೆಹುಡುಗಿಯ ಜೀವನರಂಗದಲ್ಲಿ ಇನ್ನೊಂದು ಪ್ರೇಮಲ ಜೀವವನ್ನು ತಂದು, ಅವರಿಬ್ಬರನ್ನು ಅಗಲಿಸಿ, ಆ ಕೊರಗುವಿಕೆಯಲ್ಲಿ ಸಂತಸಪಡುವ ದೈವದ ದುರ್ವಿಲಾಸ. ಕಥೆಗಳಲ್ಲಿ ಒಟ್ಟಾರೆ ಕೆಲವು ಸೂಕ್ಷ್ಮ ಅಂತಃಕರಣಗಳ ಒಳಗಿನ ಅಲೆದಾಟವು — ಹೊಯ್ದಾಟವು ಚಿತ್ರಿತವಾಗಿದೆ. ಈ ಸಂಪ್ರದಾಯವೇನೂ ಹೊಸದಲ್ಲ. ಇಂಗ್ಲಂಡಿನಲ್ಲಿ ಇದು ಮೊದಲು ಜಾರ್ಜ ಎಲಿಯಟಳಿಂದ ಆರಂಭವಾಯಿತು. ಈಗೀಗ ಅದು ಸರ್ವದೇಶಗಳ ಸಾಹಿತ್ಯದಲ್ಲಿ ರೂಢವಾಗಿದೆ. ‘ಮಾಥೂರಾಯನ ಮಂಕು’ ‘ನನ್ನ ಫೋನೋ’ ಮತ್ತು ‘ಮುಕ್ತಿಯಾತ್ರೆ’ ಎಂಬ ಕತೆಗಳಲ್ಲಿ ಇದು ಹೆಚ್ಚು ವಾಸ್ತವವಾಗಿ, ತಟ್ಟನೆ ಮನಗಾಣುವಂತೆ ಪ್ರಕಟವಾಗಿದೆ. ‘ತೀರದ ಆಸೆ’ ಹಾಗೂ ‘ಆ ಮಗು’ ಎಂಬವುಗಳಲ್ಲಿ ಇದು ಅಂತರಾಳದಲ್ಲೇ ಅಡಕವಾಗಿದೆ. ವಾಚಕರು ಈ ಕತೆಗಳನ್ನು ಸಾವಧಾನವಾಗಿ ಓದಿಕೊಳ್ಳಬೇಕೆಂದು ಪ್ರಾರ್ಥನೆ.

೧–೭–೩೧ —**ಪ್ರಕಾಶಕರು**

# ಅರಿಕೆ

'ಎಲ್ಲ ಒಗೆಯ ಬರೆವಣಿಗೆಯೂ ತನ್ನನ್ನೇ ತಾನು ಅರಿತು ಕೊಳ್ಳುವ ಎತ್ತುಗಡೆ' ಎಂಬ ನಂಬಿಗೆಯಿಂದಲೇ ನಾನು ಬರೆಯುವ ದಕ್ಕೆ ಮೊದಲು ಮಾಡಿದ್ದು. ಬರೆಯುವವರೆಲ್ಲ ತಮಗಾಗಿಯೆ ಬರೆದುಕೊಳ್ಳುವರೆಂದು ತಿಳಿಯುತ್ತೇನೆ. ಸಾಹಿತಿಯು ಸರಸ್ವತಿಯ ಆಪ್ತ ಭಕ್ತ; ಗುಪ್ತ ಪೂಜಾರಿ. ಆತನ ಪೂಜೆಭಕ್ತಿಗಳ ಗುರಿಯು ಆ ತನ್ನ ಅರಿವು. ತನ್ನ ಭಕ್ತಿಯ ಬಲದಿಂದ ತನ್ನ ಪೂಜೆಯ ಫಲವಾಗಿ ದೊರೆತ ಅಕ್ಷಯವಾದ ಪ್ರಸಾದವನ್ನು ತಾನು ಸವಿಯುತ್ತಾನೆ. ಸರಸ್ವತಿಯ ಪ್ರಸಾದವೆಂದು ನೆಚ್ಚಿ ಮೆಚ್ಚಿ ಒಳ್ಳೆಯತನದಿಂದ ಬೇಡು ವವರಿಗೂ ಅದರಲ್ಲಿ ಪಾಲುಗೊಡುತ್ತಾನೆ. ಇದು ನಾನು ಪಡೆದ ಪ್ರಸಾದ. ನನಗೇನೊ ಇದರಲ್ಲಿ ತುಂಬಾ ಸವಿ. ಇದನ್ನು ಲಾಲಸೆ ಯಿಂದ ಸವಿದ ಉಳಿದವರು ಈ ಫಲದ ಯೋಗ್ಯತೆಯನ್ನು ಹೇಳಿದರೆ ಅದರಿಂದ ನನ್ನ ಭಕ್ತಿಯ ಬಲವನ್ನು ಅಳೆದುಕೊಳ್ಳಲು ನೆರವಾದೀತು.

ಇಲ್ಲಿ ಕೊಟ್ಟ ಕಥೆಗಳಲ್ಲಿ ಮೊದಲನೆಯದು ಈಗ ಒಂದೂವರೆ ವರ್ಷದ ಹಿಂದೆ ಬರೆದ 'The Grand Perhaps' ಎಂಬದೊಂದು ಇಂಗ್ಲೀಷು ಕಥೆಯ ಕನ್ನಡರೂಪ. ಈ ಕಥೆಯ ಕೊನೆಯಲ್ಲಿ ಬರುವ ಗೀತವು ಶೆಲೆ(Shelley)ಯ 'He came like a dream in the dawn of life, He fled like a shadow before its noon' ಮೊದ ಲಾದ ಕೆಲವು ಬಿಡಿ ಸಾಲುಗಳ ಭಾವಾನುವಾದ.

ಈ ಎಳೆಗತೆಗಳನ್ನು, ಜಯಕರ್ನಾಟಕ ಗ್ರಂಥಮಾಲೆಯವರ ಒತ್ತಾಸೆಗಾಗಿ ಈಗಲೇ ಬಯಲಿಗೆ ತರಬೇಕಾಯಿತು. ಆದರೂ, ಗ್ರಂಥಮಾಲೆಯವರು ಈ ವಿಷಯದಲ್ಲಿ ತೋರಿಸಿದ ಆದರಕ್ಕಾಗಿ ತುಂಬಾ ಕೃತಜ್ಞನಾಗಿಯೆ ಇದ್ದೇನೆ.

**—ಕೃಷ್ಣಕುಮಾರ**

# ಪರಿವಿಡಿ



---

**ಸೂಚನೆ:—** ೩೧ ನೆಯ ಪುಟದಲ್ಲಿ ೧೫—೧೭ ಸಾಲುಗಳ ವಾಕ್ಯವು ಹೀಗಿರಬೇಕಾಗಿದ್ದಿತು.—' ಒಡನೆಯೇ ಬಾಗಿಲಿಗೆ ಬಂದು, ಆ ಮಗುವು ಕಾಣುವಂತಿದ್ದರೆ, ಅದನ್ನೇ ನೋಡುತ್ತ ನಿಂತು ಒಮ್ಮೊಮ್ಮೆ ಕಸಿವಿಸಿಯನ್ನೂ ಬೇರೊಮ್ಮೆ ಹರುಷವನ್ನೂ ಪಡುತ್ತಿದ್ದೆ. ಆ ಮಗುವು, ಕಾಣದಂತಿದ್ದರೆ, ಅದರ ದನಿಯನ್ನೇ ಕೇಳುತ್ತ ಕೈಗೆಲಸಗಳನ್ನೆಲ್ಲ ಬಿಟ್ಟು ಆ ಮಗುವಿನ ರೂಪವನ್ನು ಕಣ್ಣೆದುರು ಕಲ್ಪಿಸಲು ಹವಣಿಸುತ್ತಿದ್ದೆ.'

# ತೀರದ ಆಸೆ

## ೧

ಆ ಸಲ ನಾವು ಮತ್ತೊಮ್ಮೆ ನೈನಿತಾಲಕ್ಕೆ ಹೋದೆವು. ನೈನಿತಾಲವೆಂದರೆ ನನಗೊಂದು ಹುಚ್ಚು. ಆಲ್ಮೋರಾ, ರಾಣೀಖೇಟ, ಸಿಮ್ಲಾ, ಮಸೋರಿಗಳಲ್ಲಿ ನಾವು ಅದೆಷ್ಟೋ ಸಲ ಹೋಗಿ ಇದ್ದೆವಾದರೂ, ಈ ಸ್ಥಳಗಳಾವವೂ ನೈನಿತಾಲದಂತೆ ನನಗೆ ಹುಚ್ಚು ಹಿಡಿಸಿದ್ದಿಲ್ಲ. ಆಲ್ಮೋರಾ, ಮಸೋರಿಗಳಲ್ಲಿ ಸೃಷ್ಟಿಯ ಸೊಬಗು ಹೊಟ್ಟೆ ಹಿಡಿಸದ ನಗುವಿನಂತೆ ವಿಜೃಂಭಿಸುವದು. ನೈನಿತಾಲದಲ್ಲಿ ಆ ಸೊಬಗು ಒಂದು ಮುತ್ತಿನ ಮುಗುಳ್ನಗೆಯಂತೆ ಮೆಲ್ಲಗೆ ಅರಳಿರುವದು. ನನಗೇನೋ ಸೌಂದರ್ಯವು ಸೌಮ್ಯವಾಗಿದ್ದರೇ ಮೆಚ್ಚುಗೆ. ಅಂತೆಯೇ ನೈನಿತಾಲದ ಮೇಲೆ ನನಗಷ್ಟು ಜೀವ.

ಆಗ ಅದೇ ವಸಂತಕಾಲವು ಮೆಲ್ಲಗೆ ಚಿಗುರುತ್ತಲಿದ್ದಿತು. ಆ ಸಲ ನಾವು ಪ್ರತಿಸಲಕ್ಕಿಂತಲೂ ಬೇಗನೆ ಹಿಮಾಲಯಕ್ಕೆ ಹೋದೆವು. ತಂದೆಯವರು ವರ್ಷದಾದಿಯಲ್ಲಿಯೇ ಪೆನ್ಶನ್ನು ತೆಗೆದುಕೊಂಡದ್ದರಿಂದ ವಿಲಂಬಕ್ಕೆ ಕಾರಣವೂ ಇರಲಿಲ್ಲ. ನಿಜವನ್ನೇ ಹೇಳುವದೆಂದರೆ, ಆ ಸಲ ತಂದೆಯವರು ಅಷ್ಟು ಬೇಗ ಹೊರಡುವದಕ್ಕೆ ನಾನೇ ಕಾರಣ. ಅದೇತಕೆಂದರೆ ಹಿಮಾಲಯದ ಬಿಳಿಬೆಳಕಿನ ಕಡಲಲ್ಲಿ ಮನದಣಿಯೆ ಈಸಾಡಬೇಕೆಂದು ನನ್ನ ಜೀವವು ಮುಂಗಾಲಮೇಲೆ ಕುಣಿಯುತ್ತಿ

ವನ್ನು ಬಿಟ್ಟುಬಿಟ್ಟೆ. ಅದೇ ಆಗ ನಾನು ಇಂಟರ ಪರೀಕ್ಷೆಯನ್ನು ಪಾಸಾಗಿದ್ದೆ, ಮುಂದೆ ಐದು ವರ್ಷಗಳ ನಂತರ, ನಾನು ಬೇನೆಯಿಂದ ಎದ್ದಮೇಲೆ ನಾನು ಬೀಎಕ್ಕೆ ಹೋಗಬೇಕೆಂದು ತಂದೆಯವರು ಇಷ್ಟಪಟ್ಟರು. ಆದರೆ ಇಂದಿನ ವಿಶ್ವವಿದ್ಯಾಲಯದ ಶಿಕ್ಷಣದಲ್ಲಿ ನನಗೆ ಅಷ್ಟೊಂದು ಮೆಚ್ಚಿಗೆ ಇರದ್ದರಿಂದ ನಾನು ಆ ಹಾದಿಯನ್ನೇ ಬಿಟ್ಟುಕೊಟ್ಟೆ. ನಿಜವಾಗಿ ನೋಡಿದರೆ, ನನ್ನ ತಂದೆ ನನ್ನ ಅಣ್ಣ ಹಾಗು ನನ್ನ ಅಕ್ಕನಿಂದ ನಾನು ಪಡೆದ ಶಿಕ್ಷಣವು ನನ್ನ ಕಾಲೇಜ ಶಿಕ್ಷಣಕ್ಕಿಂತ ಎಷ್ಟೋ ಹೆಚ್ಚಿನದೆಂದು ನಾನು ಹೇಳಬಲ್ಲೆ.

ಆ ಸಲ, ನಾವು ನೈನಿತಾಲದಲ್ಲಿದ್ದಾಗ, ನನ್ನ ತಮ್ಮ ಚಂದ್ರು, ನನ್ನ ತಂಗಿ ಗೌರಿಯೊಡನೆ ಹತ್ತರದ ಮರಟಿಗಳ ಸಾಲುಗಿಡಗಳ ನೆರಳಿನಲ್ಲಿ ಅಡ್ಡಾಡುವದಕ್ಕೆಂದು ಹೋಗುವ ಅಭ್ಯಾಸವನ್ನಿಟ್ಟು ಕೊಂಡಿದ್ದೆ.

ನಾವು ನೈನಿತಾಲಕ್ಕೆ ಹೊರಡುವದಕ್ಕೆ ನಾಲ್ಕು ತಿಂಗಳು ಮುಂಚೆ, ನನ್ನ ಅಣ್ಣನು ಕೃಷಿಶಾಸ್ತ್ರದ ಅಭ್ಯಾಸಕ್ಕಾಗಿ ಹಾಲಂಡಕ್ಕೆ ಹೋಗಿದ್ದ. ಆ ಸಲ ಆತನೂ ನನ್ನೊಡನೆ ನೈನಿತಾಲದಲ್ಲಿಯೇ ಇದ್ದುಬಿಟ್ಟಿದ್ದರೆ, ನನ್ನ ಬೇಸರದ ಬಾಳು ಎಷ್ಟೊಂದು ಸವಿಯಾಗ ಬಹುದಿತ್ತಲ್ಲ ಎಂದು ಕೊರಗುತ್ತಿದ್ದೆ. ಇಲ್ಲವೆ ನನಗಾದರೂ ಮೈಯಲ್ಲಿ ಸಾಕಷ್ಟು ಬಲವಿದ್ದಿದ್ದರೆ, ತಂದೆಯವರ ಆಕಾಂಕ್ಷೆಯಂತೆ ನಾನೂ ಅಣ್ಣನೊಡನೆ ವಿಲಾಯತಿಗೆ ಹೋಗಬಹುದಾಗಿತ್ತು ಎಂದು ಮರುಗು ತ್ತಿದ್ದೆ. ಆದರೆ ನನಗೆ ಎರಡೂ ಭಾಗ್ಯಗಳಿರಲಿಲ್ಲ.

೪

ನನ್ನ ಮೇಲೆ ಬರೆದ ತನ್ನದೊಂದು ಭಾವಗೀತದಲ್ಲಿ ಅಣ್ಣನು

ನನ್ನನ್ನು ಹೀಗೆ ಬಣ್ಣಿಸಿದ್ದಾನೆ:—

"ನಿನ್ನ ಬಿಳಿಯ ತುಟಿಯ ಮೇಲೆ,
ಕಂಣ ಎಳೆಯ ಎಸಳ ಮೇಲೆ,
ಚೆಂದ ಚೆಲುವದೊಂದು ತನ್ನ
ಬಂಣಗನಸುಗಳಲಿ ಮುಳುಗಿ
ಪವಡಿಸಿರುವದು!"

ನನ್ನ ಚೆಲ್ವಿಕೆಯ ಅರಿವು ನನಗೂ ಇದ್ದಿಲ್ಲವೆಂತಲ್ಲ. ಆದರೂ ನನ್ನ ಅಣ್ಣನು ಅದನ್ನು ಬಣ್ಣಿಸಿದಾಗ ನನ್ನ ಹೊಟ್ಟೆಯಲ್ಲಿ ಹಿಡಿಸಲಾರದಷ್ಟು ಹೆಮ್ಮೆಯೂ ಸಂತೋಷವೂ ಉಕ್ಕಿಬರುತ್ತಿದ್ದವು. ಹೀಗೆ ಹಲವು ಬಗೆಯಾಗಿ ನನ್ನ ಮನವನ್ನು ಮೋದಗೊಳಿಸುವ ನನ್ನ ಅಣ್ಣನು ಆಗ ನನ್ನ ಬಳಿಯಲ್ಲಿ ಇರದ್ದರಿಂದ ನನ್ನ ಒಂಟಿಜೀವವು ಹೆಚ್ಚಾಗಿ ಕೊರಗುತ್ತಿದ್ದಿತು. ನನ್ನ ತಂದೆ ಸಾಕಷ್ಟು ಮುಪ್ಪಿನವರಾಗಿದ್ದುದರಿಂದ, ಅವರ ಆಗೀಗಿನ ಸಲಿಗೆ, ಸ್ನೇಹ, ಮಮತೆಗಳು ನನ್ನ ನವತಾರುಣ್ಯದ ಕಲ್ಪನಾವೇಗದ ಹಾಗೂ ಭಾವನಿರ್ಭರತೆಯ ಹಸಿವನ್ನು ಹಿಂಗಿಸಲಾರದಾಗಿದ್ದವು. ನನ್ನ ಹೃದಯವು ನನ್ನ ಒಡನಾಡಿಯಾದ, ನನ್ನ ಬಾಲ್ಯಮಿತ್ರನಾದ, ಅಚ್ಚುಮೆಚ್ಚಿನವನಾದ ಅಣ್ಣನ ಸಹವಾಸವನ್ನು ಬಯಸಿ ಬೇಗುದಿಗೊಳ್ಳುತ್ತಿತ್ತು. ಆತನೆಂದರೆ ಅಷ್ಟು ಪ್ರೇಮ. ಆತನಿಗೂ ನನ್ನಲ್ಲಿ ತುಂಬ ಪ್ರೀತಿ. ನಾನು ಒಮ್ಮೆ ಬೇನೆಯಿಂದ ಬಳಲುತ್ತಿದ್ದಾಗ ಆತನು ತನ್ನೆಲ್ಲ ಸುಖಸಂತೋಷಗಳನ್ನು ಹಿಂದಟ್ಟಿ, ಮೂರು ಹಗಲು ಮೂರು ರಾತ್ರಿ ನನ್ನ ಬಳಿಯಲ್ಲೇ ಕಣ್ಣಿಗೆ ಕಣ್ಣು ಹಚ್ಚದೆ ಕುಳಿತಿದ್ದು, ಹೇಗೆ ನನ್ನ ಖೇದವನ್ನು ಮೋದಗೊಳಿಸಲು ಯತ್ನಿಸುತ್ತಿದ್ದನೆಂಬದು ಈಗಲೂ ಕಣ್ಣಿಗೆ

೨

ಮತ್ತೆ ಮೊದಲಿನ ಕತೆಗೆ ತಿರುಗಬೇಕೆಂದರೆ— ಆಗ ತಾನೇ ವಸಂತಋತುವು ಮೊಗ್ಗೆ ಹೂವಾಗುವಂತೆ ಅರಳುತ್ತಿದ್ದಿತು. ಹಿಮವು ಕರಗುವದಕ್ಕೆ ಮೊದಲು ಮಾಡಿದ್ದಿತು. ನಾ ಮೆಚ್ಚು ನೀ ಮೆಚ್ಚೆಂದು ಹೇವಗೊಂಡು ಬೆಳೆದು ಕಡಿದಾಗಿ ನಿಡಿದಾಗಿ ನಿಂತ ಹಿಮಗಿರಿಯ ಶಿಖರಗಳು ದೇವದ್ರುಮ (ಓಕ) ಗಳ ಹಳುವಿನಾಚೆಗೆ ಒಂದರ ಹಿಂದೊಂದು ತೆರೆತೆರೆಯಾಗಿ ಹಬ್ಬಿಕೊಂಡಿದ್ದವು.

ನಮ್ಮ ಮನೆಯು ಒಂದು ಕೊಳ್ಳದ ದಂಡೆಯ ಮೇಲೆಯೇ ಇತ್ತು. ಅಲ್ಲಿ ನಿಂತರೆ, ಸೃಷ್ಟಿಯ ಸೊಬಗಿಗೆ ಕಂಪಿನ ಒಪ್ಪಹಾಕುವ ಮಾಟಗಾರ್ತಿಯಂತೆ ನೀಲವರ್ಣದ ಸರಸ್ಸೊಂದು ಹೂವಿನ ಹಾಸಿಗೆಯೊಂಬಂತೆ ಕಂಗೊಳಿಸುವದು. ಒಮ್ಮೊಮ್ಮೆ ನಾನು ಬದಿಯಲ್ಲಿದ್ದ ದೇವಪಥ ಪರ್ವತದ ಶಿಖರವನ್ನೇರಿ ನನ್ನ ಹಳದೀ ಬಣ್ಣದ ಕಾಶ್ಮೀರಿ ಶಾಲಿನಲ್ಲಿ ಹುದುಗಿಕೊಂಡು ಕುಳಿತಾಗ ಸೃಷ್ಟಿಯ ಅನಂತ ನೃತ್ಯಕ್ಕೆ ತಾಲಹಾಕುವಂತೆನಿಸುವ ಕಿರುಗೆಜ್ಜೆಗಳ ದನಿಯು ದೂರದ ಕುರಿದಡ್ಡಿಗಳಿಂದ ಕೇಳಬರುತ್ತಿತ್ತು. ಆಗ ನನ್ನ ಕಣ್ಣೋಟವು, ಆ ಸೊಬಗಿನ ಸಾರವನ್ನೆಲ್ಲ ಹೀರಬೇಕೆಂದು ಒಂದೊಂದೇ ಪರ್ವತಶ್ರೇಣಿಯನ್ನು ದಾಟಿ ದಾಟಿ, ಇನ್ನೂ ಹಸಿವು ಆರದಿರಲು, ಆಚೆಗೆ ಹಣಿಕಿ ಹಾಕಲು ಹಂಬಲಿಸುತ್ತಿತ್ತು.

ದಿನ ಬೆಳಗಾದರೆ ಅರುಣೋದಯಕ್ಕೆ ಮೊದಲೇ ಹತ್ತರದ ಶಿಖರವೊಂದನ್ನೇರಿ, ಏರಿಬರುವ ಸೂರ್ಯನ ಕಡೆಗೆ ಬೆನ್ನು ಮಾಡಿ ಕುಳಿತುಕೊಳ್ಳುವದು ನನ್ನ ವಾಡಿಕೆ. ಎಳೆಹರೆಯದ ಮದುಮಗಳಂತೆ '**ನಸುಕು**' ತನ್ನ ಸಿಂಗಾರದೊಡನೆ ಮೂಡಿ ಬರುತ್ತಿರುವಾಗ, ಇತ್ತ

ನನ್ನ ಕಣ್ಣ ಮುಂದೆ ತುದಿಮೊದಲಿಲ್ಲದೆ ಹಬ್ಬಿದ ಹಿಮಗಿರಿಯ ತೆರೆಯ ಮೇಲೆ ಬಣ್ಣ ಬಣ್ಣದ ಚಿತ್ರ-ಚಿತ್ತಾರಗಳು ಕಣ್ಗಿಂಬಾಗಿ ಬಂದು ಕುಣಿಯುತ್ತಿದ್ದವು. ಕೇಸರಿ–ಕಿರಮಂಜಿ ಬಣ್ಣದ ಮೋಡಗಳ ಪಡಿನೆಳಲು ಹಿಮದ ಬೆಳತಿಗೆಯೊಡನೆ ಬೆರೆತುಕೊಂಡಾಗ ಮಲ್ಲಿಗೆಯ ಮಾಲೆಯಲ್ಲಿ ಗುಲಾಬಿಯ ಹೂವುಗಳನ್ನು ಬಿಡಿಸಿದಂತೆ ಚಂದವಾಗಿ ಕಾಣುವದು. ಬೆಳ್ಳಗೆ ಹೊಳೆಯುವ ಹಿಮಾಲಯದ ಓರೆಗುಂಟ ಮುಗಿಲಿನ ಬಣ್ಣಗಳು ಚಿನ್ನಾಟವಾಡುತ್ತಿದ್ದಾಗ, ಉಷಾರಮಣಿಯು ಕೈಲಾಸದ ಹೊಸ್ತಿಲ ಮೇಲೆ ಹೊನ್ನುರನ್ನದ ಹೂ ಹುಡಿಯಿಂದ ರಂಗೋಲಿಯನ್ನು ಹಾಕುತ್ತಿರುವಂತೆ ಭಾಸವಾಗುವದು. ಇದರಿಂದ ಬೆರಗುಗೊಂಡು ಮುಗ್ಧವಾದ ನನ್ನ ಹೃದಯವು ಸೌಂದರ್ಯದೇವಿಯ ಸ್ವಪ್ನ ಸೃಷ್ಟಿಯ ಸೊಬಗಿನಲ್ಲಿ ಬೆರೆತು ಒಂದಾಗಿ ಬಿಡುವದು. ಹಿಮದ ಬಿಳಿಬೆಳಕಿನಲ್ಲಿ ಮೂಡಿಕೊಂಡ ಸಸುಕಿನ ಹೊಂಬಣ್ಣದಾಟವು ಕೊಳ್ಳದಲ್ಲಿಯ ವಿಶಾಲವಾದ ಸರೋವರದಲ್ಲಿ ಕೊನೆಮೊದಲಿಲ್ಲದೆ ಕುಣಿಯುವ ಅಲೆಗಳಲ್ಲಿ ಪಡಿಮೂಡಿಕೊಂಡಾಗ, ಪರಿಪೂರ್ಣವಾಗಿ ಶೋಭಿಸುವ ಆ ಸೌಂದರ್ಯವೈಭವವು ಇಡಿಯಾಗಿ ನನ್ನೆದೆಯಲ್ಲಿ ಒಡಮೂಡಲು ಮನುಷ್ಯ–ಕಲ್ಪನೆಯ ಕೈಗೆ ನಿಲುಕದ ದಿವ್ಯ ಸೃಷ್ಟಿಯ ಆನಂದವು ನನ್ನನ್ನು ಸುತ್ತಿ ಮುತ್ತಿ ಮುದ್ದಾಡುವಂತೆ ಅನುಭವವಾಗುವದು.

೩

ನಾನು ನನ್ನ ಹದಿನೇಳನೆಯ ವಯಸ್ಸಿನಲ್ಲಿದ್ದಾಗ ಮೊಟ್ಟಮೊದಲು ನೆಮೋನಿಯಾಕ್ಕೆ ತುತ್ತಾದೆನು. ಅಂದಿನಿಂದ ನಾನು ಅಶಕ್ತತೆಗೆ ತವರುಮನೆಯಾಗಿದ್ದೇನೆ. ಆಗಲೇ ನಾನು ಕಾಲೇಜ

ಟ್ಟಿತು. ಹಿಮವತ್ಪರ್ವತದ ದರಿಕಂದರಗಳಲ್ಲಿ ನೆಲೆಯೂಡುವ ಸೌಂದ ರ್ಯಲಕ್ಷ್ಮಿಯ ಮೃದುಮೃದುಲವಾದ ಸ್ಪರ್ಶಸುಖಕ್ಕಾಗಿ ಕಾತರಿ ಸುವದೆಂದರೆ ಕಾವ್ಯವನ್ನು ಬರೆಯುವದಕ್ಕೆ ಹಾತೊರೆದಂತೆ. ಆದರೆ ನನ್ನ ಹೃದಯವನ್ನೇ ಒಲಿಸಿ ನಲಿಸಿ, ಕುಣಿಸಿ ತಣಿಸಿ, ಮುದ್ದಾಡಿ ಮರುಳುಗೊಳಿಸುವ ತಂಗಾಳಿಯ ತೆರೆಗಳಗುಂಟ ತೇಲುತ್ತ ಹಿಮಾ ಲಯದ ಕೊಳ್ಳಗಳಲ್ಲಿ ನಾನು ಸುಳಿದಾಡುವಾಗ ಕಾವ್ಯಸುಧೆಯೇ ನನ್ನ ಜೀವನದ ನಾಡಿನಾಡಿಗಳಲ್ಲಿ ತುಂಬಿ ತುಳುಕುತ್ತಿರುವಂತೆ ನನಗೆನಿಸುವದು. ನಾನು ಹೆಚ್ಚಾಗಿ ಕವಿತೆಗಳನ್ನು ಬರೆದದ್ದು ಹಿಮಾಲಯದ ರಾಮಣೀಯಕತೆಯಿಂದ ಅಗಲಿದ್ದಾಗಲೆ. ಏಕೆಂದರೆ ಆಗ ನನ್ನೆದೆಯಲ್ಲಿ ಬಲವಾದ ಹಂಬಲವು ತುಂಬಿ ವಿರಹಯಾತನೆಗಳು ನನ್ನ ಭಾವನೆಗಳನ್ನು ತುಳುಕಿಸುತ್ತಿದ್ದವು. ಆದರೆ ನಾನು ಹಿಮಾ ಲಯದ ಹಳ್ಳ-ಕೊಳ್ಳಗಳಲ್ಲಿ ಇದ್ದಾಗ ಬೆಳ್ಳಿಯ ಬೆಳಕೇ ಹಾಳಿಹಾಳಿ ಯಾಗಿ ಹಬ್ಬಿದಂತೆ ಕಂಗೊಳಿಸುವ ಹಿಮರಾಶಿಯನ್ನು ಕಂಡು ನನ್ನ ಹೃದಯವು ತಣಿವುಗೊಂಡು ಮುಗ್ಧವಾಗಿ ಬಿಡುತ್ತಿದ್ದಿತು. ಭೂಮಿ ಗಿಳಿದು ಬಂದಂತಿದ್ದ ಆ ಅಪಾರವಾದ ಕ್ಷೀರಸಾಗರದ ವಿಶಾಲ ವೈಭವ ವನ್ನು ಕಣ್ಣಲ್ಲಿ ಕಣ್ಣಿಟ್ಟು ಎವೆಯಿಕ್ಕದೆ ನೋಡುತ್ತ ನಿಂತೆನೆಂದರೆ ಕಣ್ಣಳವಿನಾಚೆಗೆ ಅಡಗಿರುವ ಅದಾವುದೋ ಒಂದು ಪರ್ವತಶಿಖರ ದಿಂದ ಹರಿದು ಬರುವ ಗಂಧರ್ವ ಗಾನಲಹರಿಗಳು ನನ್ನ ಹೃದಯ ವನ್ನು ಮುಟ್ಟಿ ತಟ್ಟಿ ಅಲ್ಲಿ ಸಂಗೀತದ ತರಂಗಗಳನ್ನು ಹುಟ್ಟಿಸು ವವು. ಆಗ ಮೌನವೇ ನನ್ನ ಹೃದಯದ ಹಾಡಾಗಿ ಮಡುವುಗಟ್ಟಿ ನಿಂತಂತೆ ಭಾವನೆಯಾಗುವದು.

ಆದರೆ ನನ್ನ ಅಣ್ಣನು ಹೆಚ್ಚಾಗಿ ಕವಿತೆಗಳನ್ನು ಬರೆಯುತ್ತಿ

ದ್ದುದು ನಾವು ಹಿಮಾಲಯದಲ್ಲಿದ್ದಾಗಲೆ. ನಮ್ಮದು ಕವಿಗಳ ಕುಲವೆಂದು ಹೇಳಬಹುದು. ನನ್ನ ತಂದೆಯವರು ಕವಿಗಳಾಗಿದ್ದರು. ನನ್ನ ಅಣ್ಣ-ಅಕ್ಕಂದಿರಿಬ್ಬರೂ ಕವಿತೆಗಳನ್ನು ಬರೆಯುತ್ತಿದ್ದರು. ನಾನೂ ಕೂಡ ಆಗಾಗ್ಗೆ ಬರೆಯುತ್ತಿದ್ದೆ. ನನ್ನ ಹೃದಯದ ತುಂಬ ಭಾವನೆಗಳು ತುಂಬಿರುತ್ತಿದ್ದರೂ ನಾನು ಅವುಗಳನ್ನು ಹೆಚ್ಚಾಗಿ ತುಳುಕಗೊಡುತ್ತಿದ್ದಿಲ್ಲ, ಎಂತಲೆ ಕವಿತೆಗಳು ನನ್ನೊಳಗಿನಿಂದ ಮೇ ಲಿಂದ ಮೇಲೆ ಹೊರಸೂಸಿ ಬರುತ್ತಿರಲಿಲ್ಲ. ಚಿಕ್ಕಮಕ್ಕಳು, ಕಾಲುವೆ ತುಂಬ ಹರಿಯುವ ಮಳೆಗಾಲದ ನೀರಿನಗುಂಟ ಹಾಳೆಯ ಹಡಗ ಗಳನ್ನು ತೇಲಿಬಿಟ್ಟು ಕೈತಟ್ಟಿ ಕುಣಿದು ನಲಿಯುವಂತೆ ನಾನು ಕೂಡ ನನ್ನ ಭಾವನೆಗಳನ್ನು ಶೂನ್ಯಸಾಗರದ ಗಾಳಿಯಲೆಗುಂಟ ನಿಟ್ಟಿರಿ ಯದೆ ತೇಲಿಬಿಡುತ್ತಿದ್ದೆ. ಅದೇಕೋ—ಅದರಲ್ಲಿಯೇ ನನಗೊಂದು ಆನಂದ. ಆದುದರಿಂದ ಹೆಚ್ಚಾಗಿ ನಾನು ನನ್ನ ಭಾವನೆಗಳನ್ನು ಒರೆ ದಿಡುವ ಗೋಜಿಗೇ ಹೋಗುತ್ತಿರಲಿಲ್ಲ. ನನ್ನ ಅಣ್ಣನಾದರೋ ಕವಿ ಯೆಂದು ಹೆಸರು ಪಡೆದಿದ್ದಾನೆ. ನನಗೆ ಮಾತ್ರ ಯಾರೂ ಹಾಗೆಂದು ಹೆಸರಿಟ್ಟಿಲ್ಲ. ಆದರೂ ನನ್ನಣ್ಣನಿಗೆ ಮಾತ್ರ ತನ್ನ ಕವಿತೆಗಳಿಗಿಂತ ನನ್ನ ಕವಿತೆಗಳ ಮೇಲೆಯೆ ಹೆಚ್ಚು ಮೆಚ್ಚಿಗೆ. ಕಾರಣ ನನ್ನ ಕವಿತೆ ಗಳನ್ನು ಪ್ರಸಿದ್ಧಿಸಬೇಕೆಂಬ ಹಂಬಲದಿಂದ ಆತ ಎಷ್ಟುಸಲ ದುಂಬಾಲ ಬಿದ್ದರೂ ನಾನೆಂದೂ ಹಾಗೆ ಮಾಡಗೊಟ್ಟಿಲ್ಲ. ಅದಕ್ಕಾಗಿ ನನಗೂ ಆತನಿಗೂ ಮೇಲಿಂದ ಮೇಲೆ ಜಗಳ. ನಮ್ಮ ಹೃದಯದ ಹಸುಗೂಸು ಗಳಂತಿದ್ದ ಭಾವನೆಗಳನ್ನು ಸುಮ್ಮಸುಮನೆ ಬೈಲಿಗಿಟ್ಟು ಸಿಕ್ಕ ಸಿಕ್ಕವರ ದೃಷ್ಟಿಗೇಕೆ ಅವನ್ನೀಡು ಮಾಡಬೇಕೋ—ನನಗಂತೂ ತಿಳಿಯದು.

ಕಟ್ಟಿದೆ. ನನ್ನ ಬೇಸಗೆಗೂಳಕತನಕ್ಕೆ ಬೇಸತ್ತು ತಾಯಿಯವರು ಕೂಡ ಒಮ್ಮೊಮ್ಮೆ ಸಿಡಿಸಿಡಿಹಾಯುವರು. ಆದರೆ ಅಣ್ಣನೆಂದಿಗೂ ಹಾಗೆ ಮಾಡುತ್ತಿರಲಿಲ್ಲ. ಅಷ್ಟು ಪ್ರೇಮ ನನ್ನಲ್ಲಿ ಆತನಿಗೆ.

ಆದರೆ ಆ ನನ್ನ ಏಕಾಂತಜೀವನದ ಹಾಡನ್ನು ನಾನು ಅಣ್ಣನಿಗೆ ಬರೆಯಲು ಬಯಸಲಿಲ್ಲ. ಏಕೆಂದರೆ ನನ್ನನ್ನು ಇಲ್ಲಿ ಬಿಟ್ಟು ಏಕಾಕಿಯಾಗಿ ಪರದೇಶದಲ್ಲಿ ತೊಳಲುತ್ತಿದ್ದ ನನ್ನಣ್ಣನ ಪಾಡೇನು ನನಗಿಂತ ಸುಖಮಯವಾಗಿರದೆಂದು ನನಗೆ ಗೊತ್ತಿತ್ತು.

೫

ಅಂದು ಏಪ್ರಿಲ್ ಹದಿನೈದನೆಯ ತಾರೀಖು. ನಾನು ನಿತ್ಯದಂತೆ ವನಪ್ರಾಂತದಲ್ಲಿ ತಿರುಗಾಡಿ ಬರಲೆಂದು ಹೊರಹೊರಟೆ. ಅಂದು ನನಗೆ ದಿನಕ್ಕಿಂತ ತುಸು ತಡವಾಗಿದ್ದಿತು. ಸೂರ್ಯನು ಆಗಲೆ ಮೇಲಕ್ಕೇರಿದ್ದ. ಹಿಂದಣ ರಾತ್ರಿ ತಂದೆಯವರಿಗೆ ಅಸ್ವಸ್ಥತೆಯಾದುದರಿಂದ ನಡುರಾತ್ರಿಯವರೆಗೂ ನಾನು ಎಚ್ಚರಿಯಬೇಕಾಗಿದ್ದಿತು. ಅಂತೆಯೆ ಅಂದಿನ ಬೆಳಗು, ಉಷಾದೇವಿಯ ಮಾಟದಾಟದ ನೋಟಕ್ಕೆ ನಾನು ಎರವಾದೆ.

ಗೌರಿಯು ನನ್ನ ಕಿರಿಬೆರಳನ್ನು ಹಿಡಿದುಕೊಂಡು ಬದಿಯಲ್ಲೇ ನಡೆಯುತ್ತಿದ್ದಳು. ಚಂದ್ರನು ಪಾತರಗಿತ್ತಿಗಳ ಬೆಂಬತ್ತಿ ಮುಂದೆ ಓಡುತ್ತಿದ್ದ. ಜಾಜಿಯು ಹಾದಿಯಲ್ಲಿ ಉದುರಿದ ತರಗೆಲೆಗಳನ್ನು ಮೂಸುತ್ತ ನನ್ನಡಿಯ ಬಳಿಯಲ್ಲೇ ಬೆಂಬತ್ತಿ ಬರುತ್ತಿತ್ತು. ನಾನು ನನ್ನ ಗಾಳಿಯೆಣಿಕೆಗಳಲ್ಲಿ ಮುಳುಗಿ, ನಾಗಮುರಿಗೆಯಂತೆ ಗಿರಿಶಿಖರವನ್ನು ಸುತ್ತುತ್ತಲಿದ್ದ ದಾರಿಯನ್ನು ಮೆಲ್ಲಗೆ ಏರುತ್ತಲಿದ್ದೆ. ಆಗ ನನ್ನ ತಲೆಯಲ್ಲಿ ಚಿಕ್ಕ ಗೀತವೊಂದು ಒಡಮೂಡುತ್ತಿದ್ದಿರಬೇಕು.

ಗಿರಿಶಿಖರವನ್ನೇರಿ ನಾನು ನನ್ನ ವಾಡಿಕೆಯ ಮೆಟ್ಟನ್ನು ಹಿಡಿದು ಕುಳಿತೆ. ಇತ್ತ ಚಂದ್ರನು ತಾನು ಹಿಡಿದುತಂದ ತರತರದ ಪಾತರ ಗಿತ್ತಿಗಳನ್ನು ಗೌರಿಗೆ ತೋರಿಸುತ್ತಲಿದ್ದ. ಉತ್ತರಕ್ಕೆ ದೂರದಲ್ಲಿ ನಂದಾದೇವಿಯ ಉನ್ನತವಾದ ಶಿಖರಗಳು ಬೆಳಗಿನ ಸೂರ್ಯನ ಬೆಳಕಿನ ಹೊಳೆಯಲ್ಲಿ ಮಿಂದು ಝಗಝಗಿಸುತ್ತಿದ್ದವು. ಆ ಹಿಮಶಿಖರದಿಂದ ಚಕಚಕಿಸುವ ರಜತರಶ್ಮಿಗಳು ಹೊರಚಿಮ್ಮಿ ಸೂರ್ಯಕಿರಣದೊಂದಿಗೆ ಬೆರೆತು ಬೆಳ್ಳಿಯೆಳೆಗಳಿಂದ ಹೆಣೆದ ಜಾಲದಂತೆ ಕಂಗೊಳಿಸುತ್ತಲಿದ್ದವು.

ತಂದೆಯವರ ಅಸ್ವಸ್ಥತೆಯ ಮೂಲಕ ನಾನು ಬಹಳ ವೇಳೆ ತಡೆಯುವಂತಿರಲಿಲ್ಲ. ಕಾರಣ, ನಾನು ನನ್ನ ಕವಿತೆಗಳನ್ನು ಬರೆದಿಟ್ಟು ಕೊಂಡು ಮನೆಗೆ ಹೊರಡಲು ಅನುವಾದೆ. ಸನಿಯದಲ್ಲಿಯೆ ಹಂಚು ಹಲಿಪೆಗಳ ಆಟದಲ್ಲಿ ತೊಡಗಿದ ಗೌರಿ-ಚಂದ್ರರು ನನ್ನ ಕೂಗನ್ನು ಆಲಿಸಿ ಒಡನೆಯೇ ಓಡಿಬಂದರು. ಆದರೆ ಅವರೊಂದಿಗೆ ಬಾಬಿಯು ಇರಲೇ ಇಲ್ಲ. ಗೌರಿ–ಚಂದ್ರರಿಬ್ಬರೂ ತಾವು ಬಾಬಿಯನ್ನು ಕಾಣೆ ವೆಂದು ಕೈಹೊರಳಿಸಿ ಬಿಟ್ಟರು. ಹತ್ತಿರವೇ ಎಲ್ಲಾದರೂ ಅಡಗಿರ ಬಹುದೆಂದು ನಾವೆಲ್ಲ ಸೇರಿ 'ಬಾಬಿ, ಬಾಬಿ, ಬಾಬಿ' ಎಂದು ಕೂಗಿ ದೆವು. ಬದಿಯ ಗಿರಿಕಂದರಗಳಿಂದ ಮೆತ್ತನ್ನ ಪ್ರತಿಧ್ವನಿಯು ಅಲೆಯಲೆ ಯಾಗಿ ಕೇಳಬಂದಿತೇ ಹೊರತು ಬಾಬಿ ಮಾತ್ರ ಬರಲೇ ಇಲ್ಲ. ಬಾಬಿಯು ತಮ್ಮನ್ನು ತಪ್ಪಿಸಿಕೊಂಡಿದೆಯೆಂದು ಆ ಮಗುಗಳಿಗೆ ಹೊಳೆದೊಡನೆ ಅವರಿಬ್ಬರೂ ಬಿಕ್ಕಳಿಸಿ ಅಳುವದಕ್ಕೆ ಮೊದಲು ಮಾಡಿ ದರು. ಬಾಬಿಯೆಂದರೆ ಅವರಿಗೆ ಅಷ್ಟು ಜೀವ.

ಬಾಬಿ ಎತ್ತ ತಪ್ಪಿಸಿಕೊಂಡಿರಬಹುದೆಂಬದು ನಮಗೆ ತೋಚದೆ

ಹೋಯಿತು. ಆ ಎಣಿಕೆಯಲ್ಲಿಯೆ, ಗುಡ್ಡದೋರೆಯನ್ನು ಇಳಿದು ಒಂದು ದಾರಿಯ ಕೂಟನ್ನು ಸೇರಿ ಅತ್ತಿತ್ತ ಹುಡುಕಾಡಿದೆವು. ಹೋಗುವ ಕಾಲಕ್ಕೆ ಆ ಸ್ಥಳದಲ್ಲಿ ಬಾಬಿಯು ನನ್ನ ಹಿಂದೆಯೇ ಬರುತ್ತಿದ್ದನೆಂಬುದು ನನ್ನ ಲಕ್ಷದಲ್ಲಿತ್ತು. ಆದ್ದರಿಂದ ಅಲ್ಲಿ ನಿಂತು ಬಾಬಿಯನ್ನು ಮತ್ತೂ ಕೂಗಿದೆವು. ಬಾಬಿಯ ಅಚ್ಚೆಯ ಧ್ವನಿಯು ನಮ್ಮ ಕೂಗನ್ನು ಎದುರುಗೊಳ್ಳಲಿಲ್ಲ. ಗೌರಿ–ಚಂದ್ರರೊಡನೆ ನಾನು ಅತ್ತಿತ್ತ ಬಾಬಿಯನ್ನು ಹುಡುಕುವದನ್ನು ಆರಂಭಿಸಿದೆ. ಆದರೆ ಅದು ಎಲ್ಲಿ ಹೋಗಿತ್ತೋ ಬಲ್ಲವರಾರು? ಎಷ್ಟೋ ದಾರಿಗರನ್ನೂ ಎಷ್ಟೋ ಒಕ್ಕಲಿಗರನ್ನೂ ಕೇಳಿ ನೋಡಿದೆವು. ಹಲವು ಬಂಗಲೆಗಳಲ್ಲಿ ವಿಚಾರಿಸಿ ನೋಡಿದೆವು; ಹಲವು ದಾರಿಗಳಲ್ಲಿ ಸುತ್ತಾಡಿ ನೋಡಿದೆವು. ಎಲ್ಲೆಲ್ಲೂ ಬಾಬಿಯ ಸುಳಿವೇ ಇಲ್ಲ. ನನಗಂತೂ ಕಳವಳಿಕೆಯು ಇಮ್ಮಡಿಸಿತು. ಸಾಲದ್ದಕ್ಕೆ, ಗೌರಿಯು ಕಾಲು ನೋಯುವದಾಗಿ ಪೀಡಿಸಹತ್ತಿದಳು. ನಾನು ಅವಳನ್ನು ಎತ್ತಿಕೊಂಡು ಚಿಂತೆಯ ಹೊರೆಯನ್ನು ಹೊತ್ತುಕೊಂಡು ಮನೆಯ ಕಡೆಗೆ ತಿರುಗಿದೆ. ಅಷ್ಟೊತ್ತಿಗೆ ಚಂದ್ರನು ತನ್ನ ಕಾಲೂ ನೋಯುವದಾಗಿ ಹಟತೆಗೆದ. ಆಗಂತೂ ನನ್ನ ಸೈರಣೆಯು ಕೈಮೀರುವಂತೆ ತೋರಿತು.

ಇದೇ ಹೊತ್ತಿಗೆ, ಸ್ವಲ್ಪ ದೂರದಲ್ಲಿ ದಾರಿಯ ಬದಿಯ ಒಂದು ಗಿಡದ ಬೊಡ್ಡೆಯಲ್ಲಿ ಯಾರೋ ಒಬ್ಬರು ಓದುತ್ತ ಕುಳಿತಿದ್ದು ಕಣ್ಣಿಗೆ ಬಿತ್ತು. ನಾವು ಬಳಿಸಾರುತ್ತಿರಲು ಚಂದ್ರನ ಅಳುವಿನ ದನಿಯು ಆತನ ಲಕ್ಷವನ್ನೆಳೆಯಿತು. ಕೆಳಮೊಗವಾಗಿ, ತನ್ನ ತೊಡೆಯ ಮೇಲಣ ಪುಸ್ತಕವನ್ನು ಓದುತ್ತಿದ್ದಾತನು, ಮೊಗವೆತ್ತಿ ನಮ್ಮನ್ನು ಮಾಲಿಸುತ್ತಿದ್ದಾಗ ಆತನ ಕಣ್ಣಿನಿಂದ ಪ್ರಶಾಂತಗಂಭೀರವಾದ ಕರುಣಾಪೂರಿತವಾದ ಕಳೆಯು ಹೊಳೆದು ಬರುತ್ತಿದ್ದಿತು.

ನಮ್ಮಿಬ್ಬರ ಕಣ್ಣಾಮುಚ್ಚಾಲೆ ಕಳೆಯುತ್ತಿರುವಂತೆಯೇ ನಾನು ಕೇಳಿದೆ: 'ಒಂದು ನೊರೆಬಣ್ಣದ, ಉಣ್ಣೆಗೂದಲದ, ಹಣೆಯಲ್ಲಿ ಕಪ್ಪು ಕಲೆಯಿದ್ದ, ಚಿಕ್ಕ ನಾಯನ್ನೇನಾದರೂ ಕಂಡಿರಾ?' ನನ್ನ ಮಾತಿಗೆ ಆತ ಪುಸ್ತಕವನ್ನು ಮುಚ್ಚುತ್ತ ದಾರಿಗೊಳಿದು ಒಂದು, ಅಂಥದೊಂದು ನಾಯಿ ಅರ್ಧ ಗಂಟೆಯ ಹಿಂದೆ ತನಗೆ ಬೆಟ್ಟಿಯಾದು ದಾಗಿ ಹೇಳಿದನು. ಹೇಳುಹೇಳುತ್ತಿರುವಂತೆಯೆ ಆತನ ಕಣ್ಣುಗಳು ಸುತ್ತಲೂ ಅರಸುತ್ತಲಿದ್ದವು. ನಾಯಿಯು ದಕ್ಷಿಣ ಬೀದಿಯುತ್ತ ಹೋದುದಾಗಿ ನುಡಿಯುತ್ತ ಆತ ಆ ದಿಟ್ಟನ್ನು ಹಿಡಿದು ನಾಗದ. ನಾನೂ ಆತನನ್ನು ಬೆಂಬತ್ತಿದೆ.

ಆತನು ಚಂದ್ರನನ್ನೆತ್ತಿಕೊಂಡ; ಗೌರಿಯು ನನ್ನ ತೋಳಿನಲ್ಲಿದ್ದಳು. ಹೀಗೆ ಇಬ್ಬರೂ ಸೇರಿ, ಮತ್ತೆ, ಒಂದು ಹಾದಿ, ಒಂದು ಬೀದಿ, ಒಂದು ಬಂಗಲೆ, ಒಂದು ತೋಟವೆನ್ನದೆ ಎಲ್ಲೆಲ್ಲೂ ಸುತ್ತಿ ಅರಸಿದೆವು. ನಾನಂತೂ ಒಳಲಿ ಬೆಂಡಿಸಂತಾದೆ. ಅಷ್ಟೊತ್ತಿಗೆ ಹೊತ್ತು ಹತ್ತಕ್ಕೆ ಬಂತು. ಏನೇನಾದರೂ ಬಾಬಿಯ ಸುಳಿವೇ ಸಿಕ್ಕದಿರಲು, ನಾನು ಹುಡುಕುವ ಎತ್ತುಗಡೆಯನ್ನೇ ಬಿಟ್ಟರಾಯಿತು ಎಂದೆ. ಮುಂದೆ ತುಸು ಹೊತ್ತಿನಲ್ಲಿ ಆತನೂ ನನ್ನ ಮಾತಿಗೆ ಒಪ್ಪಿದ್ದರಿಂದ ನಾವೆಲ್ಲ ಮನೆಯ ಕಡೆಗೆ ಮೋರೆ ಮಾಡಿದೆವು. ಆತ ನಮ್ಮ ಬಂಗ್ಲೆಯ ಗೇಟಿನ ವರೆಗೂ ಬಂದು, ಆಳು ಚಂದ್ರನನ್ನೆತ್ತಿಕೊಂಡೊಡನೆ ಒಂದು ನಿರ್ಮಲವಾದ ಮಂದಸ್ಮಿತದಿಂದ ನನ್ನನ್ನು ವಂದಿಸಿ ಹೊರಟನು. ನಾನು ಅಂದು ನಮ್ಮಲ್ಲಿಯೇ ಊಟವಾಗಲಿ ಎಂದೆ. ದಯವಿಟ್ಟು ಕ್ಷಮಿಸಬೇಕಾಗಿ ಬೇಡಿ ನನ್ನನ್ನು ಬೀಳ್ಕೊಂಡನು.

ಅದು ನಮ್ಮ ಮೊದಲ ಬೆಟ್ಟಿ.

೬

ಬಾಬಿಯು ತಪ್ಪಿಸಿಕೊಂಡದ್ದಕ್ಕಾಗಿ ತಂದೆಯವರೂ ಬಹಳ ವ್ಯಸ್ತರಾದರು. ನನಗಂತೂ ಕೈಕಾಲು ಆಡದಂತೆನಿಸಿತು. ಚಂದ್ರ-ಗೌರಿಯರು ಕೂಡ, ಬಾಬಿಯಿಲ್ಲದೆ ನಿತ್ಯದಂತೆ ಊಟವನ್ನು ಸಹ ಮಾಡಲೊಲ್ಲರು. ಬಾಬಿಯನ್ನು ಕಳಕೊಂಡು ನಾವೆಲ್ಲ ಹೌಹಾರಿ ಹೋಗಿದ್ದೆವು. ಹೀಗಾದುದು ಅದೇ ಮೊದಲು. ನಮಗೆಲ್ಲಾ ಬಾಬಿಯ ಮೇಲೆ ಅತಿ ಪ್ರಾಣ. ಅಂತೆಯೇ ಅಂದಿನ ದಿನವೆಲ್ಲ ನಮ್ಮೆಲ್ಲರ ಮೋರೆ ಗಳ ಮೇಲೆ ಮೋಡಗಳೇ ಬಾಸಣಿಸಿದ್ದವು.

ಸಂಜೆಯ ಹೊತ್ತಿಗೆ, ಊರೆಲ್ಲ ಸುತ್ತಾಡಿ, ಎಲ್ಲೆಲ್ಲೂ ಬಾಬಿಯ ಜಾಡೇ ಸಿಕ್ಕದೆಂದು ಇಳಿಮೋರೆ ಹಾಕಿಕೊಂಡು ಆಳು ಹಿಂದಿರುಗಿ ಬಂದ. ಆದರೂ ರಾತ್ರಿಯ ಹೊತ್ತಿಗೆ ಬಾಬಿಯು ಎಲ್ಲಿದ್ದರೂ ಬಂದೇ ಬರುವದೆಂಬ ಆಸೆ ನಮ್ಮ ಮನದಲ್ಲಿ ಮಿಣುಕುತ್ತಿತ್ತು. ಹೀಗೆ ದಾರೀ ಕಾಯುತ್ತಿರುವಾಗಲೇ ಹತ್ತು ಗಂಟೆಯಾಗಿ ಹೋಯಿತು. ಇನ್ನೂ ಬಾಬಿಯಿಲ್ಲ. ನಮಗೆ ಏನೊಂದು ತೋಚದೆ ಎಲ್ಲರು ದಂಗುಬಡೆದಂ ತಾಗಿ ಬಿಟ್ಟೆವು. ಆ ಎಳೆ-ಮಕ್ಕಳಿಗೆ ಅಂದಿನ ರಾತ್ರಿ ಚೆನ್ನಾಗಿ ನಿದ್ರೆ ಯಿಲ್ಲ. ಹಗಲು, ಪಾಪ, ಅವರು ನಿತ್ಯದಂತೆ ಆಡಿರಲಿಲ್ಲ ಸಹ. ನಮ್ಮೆ ಲ್ಲರ ಮುದ್ದಿನ ಬಾಬಿ-ನೊರೆಬಣ್ಣದ ಮೆಚ್ಚುಮಾಟದ ಬಾಬಿ-ಎತ್ತ ಹೋಗಿದ್ದೀತೆಂಬ ದುಗುದುಗಿಯಿಂದ ಅಂದಿನ ಇರುಳೆಲ್ಲ ನನ್ನ ಕಣ್ಣಿಗೆ ಕಣ್ಣು ಹತ್ತಲೊಲ್ಲವು.

೭

ಮರುದಿನ ಬೆಳಗ್ಗೆ, ನಸಕು ಹರಿಯುವದಕ್ಕೆ ಮೊದಲೇ, ನಮ್ಮ ಬಾಗಿಲಬಳಿ ಬಲವಾದ ಸಪ್ಪಳ ಕೇಳಿತು. ನಿದ್ದೆಗಣ್ಣಿನಲ್ಲಿ, ಬಾಬಿಯೇ

ಬೊಗಳಿತೇನೋ ಎಂದು ಭಾಸವಾಗಲು, ಧಾವಿಸಿ ಒಂದು ಆಳಿಗಿಂತ ಮೊದಲು ನಾನೇ ಬಾಗಿಲು ತೆರೆದೆ. '**ಆತ**' ನಮ್ಮ ಬಚ್ಚುವೆಚ್ಚಿನ ಬಾಬಿಯನ್ನೆತ್ತಿಕೊಂಡು ಅಲ್ಲಿ ನಿಂತುಕೊಂಡಿದ್ದ. ನಂನಂನು ನೋಡಿ ದೊಡನೆ ಬಾಬಿಯು ಮೆತ್ತಗೆ ಗುರುಗುರು ಎನ್ನುತ್ತ ಆತನ ತೋಳಿ ನಿಂದೀಚೆಗೆ ಜಿಗಿದು ಬರಬೇಕೆಂದು ಹವಣಿಸಿತು. ಆದರೆ ಅಷ್ಟಕ್ಕೆ ಶಕ್ತಿ ಸಾಲಲಿಲ್ಲ. ಅದಕ್ಕೆ ಬಲವಾಗಿ ಗಾಯವಾಗಿತ್ತು.

ಆತ, ಒಳಗೆ ಬಂದು, ಬಾಬಿಯನ್ನು ಅದರ ಬೆತ್ತದ ಕುರ್ಚಿಯ ಮೇಲೆ ದಿಂಬುಹಾಕಿ ಒರಗಿಸಿದ. ನಾನು ಅದರ ಮೈ ಸವರುತ್ತಿರಲು ಬಾಬಿಯು ಕರುಣಾಮಯ ದೃಷ್ಟಿಯಿಂದ ನೋಡಿ ಬಾಲವಲ್ಲಾಡಿಸಿ ತನ್ನ ಕೃತಜ್ಞತೆಯನ್ನು ವ್ಯಕ್ತಗೊಳಿಸಿತು. ಇಷ್ಟೊತ್ತಿಗಾಗಲೆ ಗೌರಿ–ಚಂದ್ರರಿಬ್ಬರೂ ಹಾಸಿಗೆ ಬಿಟ್ಟು ಓಡಿಯೇ ಬಂದು ಬಾಬಿಯ ಕ್ಷೇಮ ಸಮಾಚಾರಕ್ಕಾಗಿ ಹಾತೊರೆಯುತ್ತಲಿದ್ದರು. ಚಂದ್ರನು ಮೆಲ್ಲನೆ ಬಾಬಿಯನ್ನು ತನ್ನ ತೋಳುಗಳಲ್ಲಿ ಎತ್ತಿಕೊಂಡಿರಲು ಗೌರಿಯು ಅದನ್ನು ಮುಟ್ಟಿ ತಟ್ಟಿ ಮುಂಡಾಡತೊಡಗಿದ್ದಳು.

ಕುಳಿತುಕೊಳ್ಳಬೇಕೆಂದು ಆತನನ್ನು ನಾನು ಬಿನ್ನವಿಸಿದೆ. ಬದಿ ಯಲ್ಲಿದ್ದ ಅರಾಮ ಕುರ್ಚಿಯಲ್ಲಿ ಕುಸಿಬಿದ್ದುಕೊಂಡು, ಆತ ಒಂದು ದೀರ್ಘ ನಿಶ್ವಾಸವನ್ನೆಳೆದ. ನೋಡಿದರೆ ಬಹಳ ನೊಂತಂತೆ ತೋರಿತು. ಸ್ವಲ್ಪ ದಣಿವಾರಿಸಿಕೊಂಡು, "ಮುನ್ನಾಯಿರುಳು ಬಾಬಿಯು ಯಾರಿಂದಲೋ ಮೈಮುರಿಯೆ ಹೊಡಿಸಿಬಡಿಸಿಕೊಂಡು, ಒಂದು ಹಾಳು ಮನೆಯಲ್ಲಿ ಬಿದ್ದುಕೊಂಡಾಗ ಅದು ತನಗೆ ದೊರೆಯಿತಾಗಿ" ಆತ ಹೇಳಿದ. ಅಂದಿನ ಇಡೀ ದಿನವೆಲ್ಲ, ಅದು ನೋವಿನಿಂದ ನರಳಿ,

ಹಸಿವೆ ನೀರಡಿಕೆಯಿಂದ ಬಳಲಿ, ಅಲ್ಲಿ ಬಿದ್ದುಕೊಂಡಿತ್ತಂತೆ. ಆತ ಅದನ್ನೆತ್ತಿಕೊಂಡು ತನ್ನ ಮನೆಗೆ ಒಯ್ದು ಅದಕ್ಕೆ ಆಹಾರವನ್ನಿತ್ತು, ಗಾಯವನ್ನು ತೊಳೆದು, ಪೋಲ್ಟೀಸು ಹಾಕಿ ಕಟ್ಟಿ, ಮಲಗಿಸಿದ್ದನಂತೆ.

ನನ್ನ ಬಾಬಿಗೂ, ನನಗೂ, ಒಟ್ಟಾರೆ ನಮ್ಮ ಮನೆತನಕ್ಕೂ ಆತ ಮಾಡಿದ ಉಪಕಾರ ಹೇಗೆ ತೀರಿಸುವದೆಂಬದೇ ತೋಚಲಿಲ್ಲ. ನಾಲ್ಕು ಉಪಚಾರದ ಮಾತು ಹೇಳಲಿಕ್ಕೂ ನಾಚಿಕೆ ಎನಿಸಿತು. ನಾನು ಆತನಿಗೆ ವ್ಯಕ್ತವಾಗಿ ಕೃತಜ್ಞತೆಯನ್ನು ತೋರಿಸಲರಿಯದೆ, ಬಾಬಿಯನ್ನೆತ್ತಿ ತೊಡೆಯ ಮೇಲೆ ಹಾಕಿಕೊಂಡು ಮೈದಡವಿ ಮುದ್ದಾಡಿದೆ. `ಕೃತಜ್ಞತೆಯನ್ನು ಪ್ರದರ್ಶಿಸುವ ಆ ನನ್ನ ವಿಚಿತ್ರವಾದ ಹೊಸ ಮಾದರಿಯಿಂದ ಆತನಿಗೆ ಸಂತೋಷವಾಯಿತು. ಅಂದು ತಂದೆಯವರ ಹೇಳಿಕೆಯ ಮೇರೆಗೆ, ಆತನನ್ನು ಬಲವಂತದಿಂದ ನಮ್ಮಲ್ಲೇ ಉಳಿಸಿಕೊಂಡೆ. ಇಳಿಹೊತ್ತಿಗೆ ಆತ ಹೊರಟು ಹೋದ.

ಅದು ನಮ್ಮಿಬ್ಬರ ಗುರುತು.

೮

ಅಂದಿನಿಂದೀಚೆಗೆ ನಾವು ಹಲವು ಸಲ ಬೆಟ್ಟಿಯಾದೆವು. ನಾನು ನನ್ನ ನಿತ್ಯಪಯಣಕ್ಕಾಗಿ ಹೊರಹೊರಟಾಗ, ಆತ ಎಂದಾದರೊಮ್ಮೊಮ್ಮೆ ನನ್ನನ್ನು ಕೂಡಿಕೊಳ್ಳುವ. ಆಗೀಗಿನ ನಮಸ್ಕಾರಗಳಿಂದ ಬೆಳೆದುಬಂದ ನಮ್ಮ ಗುರುತು ಬರುಬರುತ್ತ ಗೆಳೆತನವಾಗತೊಡಗಿತು.

ಅಣ್ಣನು ವಿಲಾಯತಿಗೆ ಹೋದಂದಿನಿಂದ ಏಕಾಕಿಯಾದ ನನ್ನ ಜೀವ ಇಂಥ ಸಹವಾಸಕ್ಕಾಗಿ ಹಂಬಲಿಸುತ್ತಿತ್ತು. ಅದರಲ್ಲಿಯೂ,

ನಮ್ಮ ಬಾಬಿಯು ಪ್ರಾಣವನ್ನುಳಿಸಿದ ಆತನ ಸಹವಾಸವೆಂದರೆ ಇನ್ನೂ ಮೆಚ್ಚಿಗೆಯಾಗಬೇಡವೆ! ಅಲ್ಲದೆ, ನಮ್ಮಿಬ್ಬರ ಗುರುತು-ಗೆಳೆತನ ಗಳನ್ನು ಗಟ್ಟಿಯಾಗಿ ಸೆಲೆಗೊಳಿಸಲು ಬಾಬಿಯೂ, ಚಂದ್ರ-ಗೌರಿ ಯರೂ ಬಹುಮಟ್ಟಿಗೆ ಕಾರಣರಾಗಿದ್ದರು. ಏಕೆಂದರೆ ತನಗೆ ಉಪಕಾರಿ ಯಾದ ಆತನನ್ನು ಕಂಡೊಡನೆ ಬಾಬಿಯು ಮುಂದರಿದು ಹೋಗಿ ಸತ್ಕರಿಸುವದು. ಅದರಂತೆಯೇ ಚಂದ್ರ ಗೌರಿಯರೂ ಆತನೊಡನೆ ಎಳೆಮಗುಗಳಿಗೆ ತಕ್ಕಂತೆ ಅಚ್ಚೆಯಿಂದ ಸಲಿಗೆಯನ್ನು ಬೆಳಸಿ ಕೊಂಡಿದ್ದರು.

ಇಂತು ನಾವಿಬ್ಬರೂ ಗೆಳೆಯರಾದೆವು.

೬

ಆತನು ಒಬ್ಬ ಒಳ್ಳೇ ಸಂಪ್ರದಾಯದ ಸಭ್ಯ ಗೃಹಸ್ಥ. ಆತನ ಮನವೊಲಿಸುವ ಸವಿನುಡಿ, ಪ್ರಶಾಂತವಾದ ಕಳೆ, ಮೃದುಲವಾದ ವರ್ತನೆ, ವಿವೇಕದಿಂದೊಡಗೂಡಿದ ಉದಾತ್ತವಾದ ಆದರ್ಶದೃಷ್ಟಿ, ಕೋಮಲತೆ–ಉತ್ಸಾಹ–ಪ್ರಸಾದಗಳಿಂದೊಪ್ಪುವ ಸ್ವಭಾವ ಮೊದ ಲಾದವುಗಳು ನನ್ನ ಮನವನ್ನೆಳೆದವು. ಆದ್ದರಿಂದ ಆತನಲ್ಲಿ ನನಗೆ ತುಂಬ ಮೆಚ್ಚಿಕೆ.

ನಮ್ಮಿಬ್ಬರ ಬೆಟ್ಟಿಗೆ ಮೊದಲು, ಏಕಾಕಿಯಾಗಿ ಆತನ ಜೀವವೂ ಬೇಸತ್ತಿರಬೇಕು. ಅಂತೆಯೇ, ನಾವಿಬ್ಬರೂ ಪರಸ್ಪರರ ಸಹವಾಸ ಕ್ಕಾಗಿ ಅಷ್ಟು ಹಾತೊರೆಯುತ್ತಿದ್ದೆವು. ನನ್ನಲ್ಲಿ ಆತನಿಗೂ ಬೇಕಾ ದಷ್ಟು ಮೆಚ್ಚಿಕೆಯಿತ್ತು. ಚಂದ್ರ-ಗೌರಿ ಬಾಬಿಯರೂ ಆತನೆಂದರೆ ಜೀವ ಕಳಕೊಳ್ಳುವರು. ಸಹಜಪ್ರೇಮಲವಾದ ಆತನ ಸ್ವಭಾವವು

ಅವರನ್ನು ಒಲಿಸಿಕೊಂಡುಬಿಟ್ಟಿತ್ತು. ಅದು ಯಾರನ್ನೂ ಒಲಿಸಿ ಕೊಳ್ಳಬಹುದಾಗಿತ್ತು.

ನಾವಿಬ್ಬರೂ ಸೇರಿ ತಿರುಗಾಡಲು ಹೊರಟಾಗ, ನಮ್ಮ ಗೆಳೆತನದ ಸವಿಗೆ ರುಚಿ ಇಮ್ಮಡಿಸುವದು. ನೈನಿತಾಲದ ಸುತ್ತು ಮುತ್ತಲಿನ ಸುಂದರವನಪ್ರಾಂತಗಳಲ್ಲಿ ಸುತ್ತುವದು ನಮ್ಮ ಪ್ರೀತಿಯ ಕೆಲಸವಾಗಿತ್ತು. ಒಮ್ಮೊಮ್ಮೆ ಹತ್ತರದ ಮರಡಿಗಳನ್ನೇರಿ ವಿಹರಿಸುವೆವು; ಇನ್ನೊಮ್ಮೆ ಕಂದರದ ಓರೆಗಳಗುಂಟ ಬೆಳೆದ ಓಕವೃಕ್ಷದ ಬನಗಳಲ್ಲಿ ಸುಸುಳಿ, ಕೊಳ್ಳದಲ್ಲಿ ಹರವಿ ಹಬ್ಬಿದ ಸರೋವರದ ದಂಡೆಯನ್ನು ಸಾರಿ, ಅಲ್ಲಿ ನನ್ನ ಕವಿತೆಗಳನ್ನು ಓದುವದರಲ್ಲಿ ಕಾಲಕಳೆಯುತ್ತಿದ್ದೆವು. ಆತನಿಗೆ ನನ್ನ ಕವಿತೆಗಳು ಬಹಳವಾಗಿ ಸೇರುತ್ತಿದ್ದವಾದ್ದರಿಂದ ಆತನ ಬೆಟ್ಟಿಯಾದಂದಿನಿಂದೀಚೆಗೆ, ನನ್ನಲ್ಲಿ ರೂಪುಗೊಂಡ ಕಲ್ಪನೆಗಳನ್ನೆಲ್ಲ ಕವಿತೆಯಾಗಿ ಬರೆದಿಡುವದಕ್ಕೆ ಆರಂಭಿಸಿದ್ದೆ. ನಾನು ಬರೆದ ಕವಿತೆಗಳನ್ನು ಮೊಟ್ಟಮೊದಲು ಓದಿತೋರಿಸುವದು ಆತನಿಗೆ; ಆಮೇಲೆ ತಂದೆಯುವರಿಗೆ. ಆದರೆ ಒಮ್ಮೊಮ್ಮೆ ಆ ಕವಿತೆಗಳಲ್ಲಿ ಕೆಲವನ್ನು ನಾನು ತಂದೆಯುವರಿಗೆ ತೋರಿಸುತ್ತಲೇ ಇರಲಿಲ್ಲ; ಆದರೆ ಆತನೆದುರು ಯಾವುದನ್ನೂ ಬಚ್ಚಿಡುತ್ತಿರಲಿಲ್ಲ.

೧೦

ಆತನೊಬ್ಬ ಸಸ್ಯಶಾಸ್ತ್ರಜ್ಞ; ಅದೇ ಹೊಸದಾಗಿ ಎಮ್. ಎಸ್. ಸಿ. ಇಳಿದಿತ್ತು. ಅಂತೂ ಆತ ಕೊನೆಗೊಮ್ಮೆ ತನ್ನ ವಿದ್ಯಾಸಾಗರದ ತೀರವನ್ನು ಕಂಡಿದ್ದ. ಮನೆಯಲ್ಲಿ ಎಲ್ಲ ಬಗೆಯ ಅನುಕೂಲತೆಗಳಿದ್ದರೂ, ಆತನಿಗೆ ವಿಲಾಯತಿಗೆ ಹೋಗುವ ಇಚ್ಛೆಯಿರಲಿಲ್ಲವಂತೆ.

ನಾವಿಬ್ಬರೂ ತಿರುಗಾಡಲು ಹೊರಟಾಗ, ನಮ್ಮಿಬ್ಬರ ಮಾತು-ಕಥೆಗಳಲ್ಲೆಲ್ಲ ಆತನೇ ಮುಂದಾಳು. ನಾನು ಹೆಚ್ಚಾಗಿ ಬಾಯಿ ಬಿಚ್ಚುತ್ತಲೇ ಇರಲಿಲ್ಲ. ಆದರೆ ನಾನು ಏಕಾಕಿಯಾಗಿದ್ದಾಗ ಮಾತ್ರ ಆತನನ್ನು ನನ್ನೆದುರಿಗೆ ಕಲ್ಪಿಸಿಕೊಂಡು ಎಡೆತಡೆಯಿಲ್ಲದೆ ಮಾತನಾಡುತಿದ್ದೆ. ಆತನು ಸಾಕ್ಷಾತ್ತಾಗಿ ಎದುರಿಗಿದ್ದಾಗ ಮಾತ್ರ ನನ್ನ ಬಾಯಿಗೆ ಬೀಗ ಬಿದ್ದು ಬಿಡುತಿದ್ದು. ಹೀಗೇಕೆ ಆಗುತ್ತಿತ್ತೋ! ನಾನರಿಯೆ... ನಾನು ಮಾತನಾಡುವ ಗೊಡವೆಗೆ ಹೋಗದಿದ್ದರೂ ಆತನು ನುಡಿಯುವದನ್ನೆಲ್ಲ ಚಾಚೂ ಬಿಡದೆ ಮನಃಪೂರ್ವಕವಾಗಿ ಕೇಳಿಕೊಳ್ಳುತ್ತಿದ್ದೆ.

ನಾವಿಬ್ಬರು ಬನಸಿರಿಯ ಬೆಡಗನ್ನು ನೋಡುತ್ತ ಅಲೆಯುತ್ತಿದ್ದಾಗ ಆತನು ನನಗೆ ತರತರದ ಗಿಡಬಳ್ಳಿಗಳನ್ನೂ ಎಲೆತಳಿರುಗಳನ್ನೂ ತೋರಿಸಿ, ಅವುಗಳ ಉಪಯೋಗವನ್ನೂ ಮಹತ್ವವನ್ನೂ ತಿಳಿಸಿ ಹೇಳುತಿದ್ದ. ನನಗೂ ಆ ಮಾತುಗಳನ್ನು ತಿಳಿದುಕೊಳ್ಳುತ್ತ ಹೋದಂತೆ ಸಸ್ಯಶಾಸ್ತ್ರದಲ್ಲಿ ಹೊಸದೊಂದು ಅಭಿರುಚಿಯು ಮೊಳೆತು ಬೆಳೆಯತೊಡಗಿತು. ನಾನು ಆತನೊಡನೆ ಸಸ್ಯಶಾಸ್ತ್ರದ ಅಭ್ಯಾಸವನ್ನು ಮುಂದರಿಸಿದಂತೆ ನಮ್ಮ ಮಾನವಜೀವನಕ್ಕಿಂತಲೂ ಸಸ್ಯಜೀವನವು ಹೆಚ್ಚು ಚಮತ್ಕಾರಿಕವಾಗಿದ್ದಂತೆ ತೋರತೊಡಗಿತು. ಆತನ ನೆರವಿನಿಂದ ಆ ಸಸ್ಯಪ್ರಪಂಚದ ಜೀವನಚರಿತ್ರೆಯು ಅಂಗೈ-ನೆಲ್ಲಿಯಂತೆ ಸ್ಫುಟವಾಗಿ ಕಾಣತೊಡಗಿತು. ಪ್ರತಿಯೊಂದು ಗಿಡ-ಬಳ್ಳಿ – ಸಸಿ – ಹೂವು-ಮೊಗ್ಗೆ-ಮುಗುಳು-ಮೊಳಕೆಗಳೂ ಆ ಸಸ್ಯಲೋಕದ ಜೀವಂತ ಪ್ರತಿನಿಧಿಗಳಂತೆ ನನ್ನ ಕಣ್ಣಿಗೆ ತೋರಹತ್ತಿದವು. ನನ್ನಕ್ಕರೆಯ ಚಂದ್ರ-ಗೌರಿ ಬಾಬಗಳಂತೆ ಅವೂ ಇರಬಹುದಲ್ಲವೆ ಎಂದು ನನ್ನ ಭಾವನೆಯಾಗತೊಡಗಿತು.

## ೧೧

ಹೀಗೇ ಕೆಲವೊಂದು ಕಾಲ ಕಳೆಯಿತು. ಆತನೊಡನೆ ಪರಿಚಯ ವಾಗಿ ನಮ್ಮ ಗೆಳೆತನವು ಬೆಳೆಯುತ್ತ ಒಂದಂತೆ ನಾನು ಅಣ್ಣನನ್ನು ಮರೆಯತೊಡಗಿದೆ. ನನ್ನಣ್ಣನ ವಿರಹದ ಕೊರತೆಯು ಆತನಿಂದ ತುಂಬಿಕೊಂಡಿತು. ಆತನೊಡನೆ ಇರುವದರಲ್ಲಿಯೆ ನನ್ನ ಜೀವಕ್ಕೆ ಸಂತೋಷವೆನಿಸುತ್ತಿತ್ತು.

ಒಂದು ದಿನ ನಾನು ಹೊರಗೆ ಹೊರಡುವದಕ್ಕೆ ಎಂದಿಗಿಂತ ಸ್ವಲ್ಪ ತಡವಾಯಿತು. ಗೌರಿ-ಚಂದ್ರರಿಬ್ಬರೂ ಬಾಬಿಯೊಂದಿಗೆ ಮುಂದೆ ಓಡಿಬಿಟ್ಟಿದ್ದರು. ಅವತ್ತು ಆತನನ್ನು ಕಾಣುವ ದಿನ. ವಾಡಿ ಕೆಯ ಸ್ಥಳದಲ್ಲಿ ಆತ ನನ್ನನ್ನು ಎದುರು ನೋಡುತ್ತ ನಿಂತಿರಲಿಲ್ಲ. ಆತನಿಗೂ ನನ್ನಂತೇ ತಡವಾಗಿದ್ದೀತೆಂದು ಬಗೆದು, ದಾರಿಯ ಬದಿ ಯಲ್ಲೇ ಆತನಿಗಾಗಿ ಕಾದು ಕುಳಿತೆ. ಅರ್ಧ ಗಂಟೆಯಾದರೂ ಆತನ ಸುಳಿವೇ ಇಲ್ಲದಾಗಲು, ಆತನು ಮೊದಲೇ ಒಂದು ಮುಂದೆ ಹೋಗಿರ ಬಹುದೆಂದು ಹೊಳೆಯಲು, ಗಿರಿಶಿಖರವನ್ನೇರಿ ನೋಡಿದರೆ, ಆತ ಅಲ್ಲಿಯೂ ಇರಲಿಲ್ಲ. ನನ್ನ ಚಿಂತೆಯು ಒಳಬಳಗೇ ಚುಚ್ಚಹತ್ತಿತು. ಎದೆಯು ಬಲವಾಗಿ ಒಡಿದುಕೊಳ್ಳುತ್ತಿರಲು, ಮೈಯೆಲ್ಲ ಒಂದು ಬಗೆಯ ಅಂಜಿಕೆಯಿಂದ ಜುಮ್ಮುಗಟ್ಟಹತ್ತಿದಂತೆನಿಸಿತು. ಆದೇಕೆ ಹಾಗಾಗಿರಬಹುದು? ಅಂಥ ಅನಪೇಕ್ಷಿತ ಸಂಗತಿ ಯಾವುದೂ ನಡೆ ದಿರಲಾರದೆಂದು ನನಗೆ ಖಂಡಿತ ಗೊತ್ತು. ಆದರೂ ಆ ನಿಷ್ಕಾರಣ ಭಯದ ಆವೇಗವು ಮಾತ್ರ ಸ್ವಲ್ಪ ಬಲವಾಗಿಯೇ ಇತ್ತು.

ಆ ಮಣ್ಣುದಿನ್ನೆಯ ಮೇಲೆ ಚಡಪಡಿಸುತ್ತ ಕುಳಿತುಕೊಂಡೆ. ಒಮ್ಮೆ ಮನೆಗೆ ಹೋಗಿಬಿಟ್ಟರಾಯಿತು ಎನ್ನಿಸಿತು; ಆದರೆ ನನ್ನ

ಕೈಕಾಲು ನನ್ನ ಮಾತು ಕೇಳುವಂತೆ ತೋರಲಿಲ್ಲ. ಕಾರಣ ಅಲ್ಲಿಯೇ ಮುಂಗೆಟ್ಟು ಕುಳಿತುಬಿಟ್ಟೆ. ಏಳು ಗಂಟೆಯ ಹೊತ್ತಿಗೆ ಒಮ್ಮೆಲೆ ನನ್ನ ಗುರುತಿನ ಧ್ವನಿಯೊಂದು ಕೇಳಬಂತು. ಧ್ವನಿ ಬಾಬುಯದು. ಬಾಬುಯು ಹಿಂದಿನಿಂದಲೆ ಆತನು ಮಗುಗಳಿಬ್ಬರನ್ನೂ ಎಡಬಲದ ಕೈಗಳಿಂದ ನಡೆಸಿಕೊಂಡು ಬರುತ್ತಿದ್ದ. ಚಂದ್ರು-ಗೌರಿಯರಿಬ್ಬರು ತಾವು ಹೊರಲಾರದಷ್ಟು ಕಾಡಹೂ ತಳಿರುಗಳ ಗೊಂಚಲುಗಳನ್ನು ಹೊತ್ತಿದ್ದರು. ಅವರ ಕಿವಿ–ಕೂದಲು–ತೋಳು–ಮುಂಗೈಗಳೆಲ್ಲ ಕಾಡಹೂ ತಳಿರಿನ ಬಳೆಗಳಿಂದಲೂ ಮಾಲೆಗಳಿಂದಲೂ ಸಿಂಗಾರವಾಗಿದ್ದುವು. ಆತನ ಕೈಯಲ್ಲಿಯೂ ಕೆಲವು ಸುಂದರವಾದ ಹೂಗಳಿದ್ದುವು. ನನ್ನ ಬಳಿ ಸಾರಿದೊಡನೆ ಆತನು ಅವುಗಳನ್ನು ನನಗೆ ಕೊಡಲು, ನಾನು ಮನದಲ್ಲಿಯೆ ನಲಿಯುತ್ತಾ ಅವನ್ನು ಮುಡಿದುಕೊಂಡೆ. ಅದರಿಂದ ಆತನಿಗೂ ಸಂತೋಷವಾಯಿತು. 'ನನ್ನ ಚಲ್ವಿಕೆಯು ಹೆಚ್ಚು ಚಂದವಾಯಿತೆ 'ಂದು ಹೇಳಿದ. ಕೃತಜ್ಞತೆಗಾಗಿ ನಾನೊಂದು ಮುಗುಳ್ನಗೆಯನ್ನು ಸಲ್ಲಿಸಲಾಗಿ, ತಾನು ಪಟ್ಟ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆತಂತೆ ಆತ ಸಂತೃಪ್ತನಾದ.

## ೧೨

ಹೀಗೆ ನಾವು ಕೆಲವು ವಾರಗಳ ಮಟ್ಟಿಗೆ ಕೂಡಿಯಿದ್ದೆವು. ಆಗ ವಾರಗಳು ಒಂದೊಂದು ದಿನಗಳಂತೆಯೂ, ದಿನಗಳು ಪ್ರಹರಗಳಂತೆಯೂ ಪ್ರಹರಗಳು ನಿಮಿಷಗಳಂತೆಯೂ ಕಾಲಪ್ರವಾಹದ ಸೆಳಪಿನಲ್ಲಿ ಸಿಕ್ಕು ಸುಸುಳಿ ಹೋದವು.

ಕೊನೆಗೊಂದು ದಿನ, ನಾಡದು ತಾನು ತನ್ನೂರಿಗೆ ಹೊರಡುವ

ದಾಗ ಆತ ಸುದ್ದೀ ಹೇಳಿದ. ಹೇಳಿದಂತೆ ಗೊತ್ತಾದ ದಿಸವೇ ಆತ ತನ್ನೂರಿಗೆ ಹೊರಟುಬಿಟ್ಟ.

೧೩

ಮಳೆಗಾಲವು ಮೊದಲಾಗುವದಕ್ಕೆ ಮುಂಚೆಯೆ ನಾವೂ ನಮ್ಮೂರಿಗಾಗಿ ತೆರಳಿದೆವು. ಆ ಸಲ ನೈನಿತಾಲದಿಂದ ಹೊರಡುವಾಗ, ನನ್ನ ಹೃದಯಕ್ಕೆ ಹುಚ್ಚು ಹಿಡಿಸಿದ ಆ ಮೆಚ್ಚಿನೂರನ್ನು ನಾನು ಕೊನೆಯವರೆಗೂ ಬಿಟ್ಟು ಹೋಗುತ್ತಿದ್ದೇನೆಂಬುದು ಹೊಳೆಯಲೆ ಇಲ್ಲ. ಊರಿಗೆ ಮರಳಿದ ಮೇಲೆ ನಾವೆಲ್ಲರು ಮತ್ತೆ ಹಿಂದಿನಂತೆ ಇರಹತ್ತಿದೆವು. ನಮ್ಮ ಜೀವನಕ್ರಮದಲ್ಲಿ ಏನಾದರೊಂದು ಕೊರತೆ ಯಾಗಲಿ ವ್ಯತ್ಯಾಸವಾಗಲಿ ಉಂಟಾದುದು ತೋರಿಬರಲಿಲ್ಲ.

ನಾವು ಊರಿಗೆ ಬಂದ ಸುದ್ದೀ ಕೇಳಿ, ನನ್ನಕ್ಕನು ಗಂಡನ ಮನೆ ಯಿಂದ ಬಂದು ಕೆಲ ದಿನ ಇದ್ದು ಹೋದಳು. ತಂದೆಯವರು ಎರಡು ಸಲ ಶ್ವಾಸರೋಗಕ್ಕೆ ಗುರಿಯಾದರೂ ಗುಣ ಹೊಂದಿದರು. ಅಕ್ಕನೊಂ ದಿಗೆ 'ಪಂಚಮಾರಿ'ಗೆ ಹೋದ ಚಂದ್ರು ಮತ್ತೆ ಮರಳಿ ಬಂದು ನನ್ನೊ ಡನೆ ಇರಹತ್ತಿದನು. ಆ ಸಲ ಮಳೆಗಾಲದ ಹೊಡೆತ ಬಲವಾಗಿದ್ದರೂ ಚಳಿಗಾಲವು ಅಷ್ಟೇನು ತೀವ್ರವಾಗಿರಲಿಲ್ಲ. ಹೀಗೆ ಎಲ್ಲ ಸ್ಥಿತಿಗತಿಯು ಇರುವಂತೆಯೆ ಇದ್ದಿತು.

ಆದರೆ, ಬಹುದಿನಗಳವರೆಗೆ ನನ್ನೊಳಗೇ ಆದ ಅಭ್ಯಂತರವನ್ನು ನಾನೇ ಅರಿಯಲಾರದೆ ಹೋದೆ. ನಾವು ನೈನಿತಾಲದಿಂದ ಹಿಂದಿರುಗಿ ದಂದಿನಿಂದ, ನನ್ನ ಹೃದಯದಲ್ಲಿ ಯಾವದೋ ಒಂದು ವ್ಯಥೆಯು ಹುದುಗಿಕೊಂಡು ಕಸಿವಿಸಿಬಡುತ್ತಿತ್ತು. ಆದುದರಿಂದಲೆ ಇದ್ದೀತು— ಇತ್ತೀಚೆ ನನಗೆ ಕವಿತೆಗಳನ್ನು ಬರೆಯುವದೇ ಆಗಿರಲಿಲ್ಲ. ಬಾಜಿಯು

ಕೂಡ ಬೇಸರವಾಗಹತ್ತಿತು. ಚಂದ್ರ–ಗೌರಿಯರೂ ನನ್ನ ಮನ ವನ್ನು ಎಳೆಯಲಾರದಾದರು. ಮುಪ್ಪಿನ ತಂದೆಯ ಜೀವಿತವು ಸಹ ಒಂದು ಹೊರಲಾಗದ ಭಾರವೆನ್ನಿಸತೊಡಗಿತು. 'ನನಗೆ ಆದದ್ದಾ ದರೂ ಏನು?' ಎಂಬುದೇ ಒಂದು ಒಡೆಯದ ಒಗಟದಂತೆ ತೋರಲು ನಾನು ನನ್ನ ಮನೋದೌರ್ಬಲ್ಯವನ್ನು ಛೇದಿಸಿ ಛೇದಿಸಿ ಪರೀಕ್ಷಿಸ ತೊಡಗಿದೆ.

೧೪

ಆತನ ಭೆಟ್ಟಿಯಾಗಿ ಇಂದಿಗೆ ಮೂರು ವರ್ಷಗಳು ಏರಿ ಹೋದವು. ಅದೇ ಮೊದಲು, ಅದೇ ಕೊನೆ. ನನ್ನ ಹೃದಯದಲ್ಲಿಯ ಗುಲಾಬಿಯನ್ನು ಕಿತ್ತುಕೊಂಡು, ಮುಳ್ಳನ್ನು ಮಾತ್ರ ಬಿಟ್ಟು ಹೋದವನು ಆತನೇ! ಆ ಮುಳ್ಳೇ ಇಂದಿಗೂ ಚುಳುಕುತ್ತಿದೆ.

ನನ್ನ ಹೃದಯವು ಆತನನ್ನು ಮೆಚ್ಚಿಕೊಂಡಿತ್ತು. ಆತನು ನನ್ನ ಬಳಿಯಲ್ಲಿದ್ದಾಗ ಈ ಮಾತು ಒಡೆದು ಕಾಣಲೇ ಇಲ್ಲ! ಆತನ ಬಳಿಯಲ್ಲಿ ಕುಳಿತಿದ್ದಾಗ, ನಾನು ಹೇಗೆ ನನ್ನ ಹುಚ್ಚು ಎಣಿಕೆಗಳಲ್ಲೇ ಮುಳುಗಿರುತ್ತಿದ್ದೆನೆಂಬುದು ಇಂದಿಗೂ ನೆನಪು ಬರುತ್ತಿದೆ. ನನ್ನ ವಿವೇ ಕವು ಆ ಎಣಿಕೆಗಳ ಮಬ್ಬನ್ನು ಹೊಡೆದೋಡಿಸಲಾರದಾಗಿತ್ತು. ಸವಿ ಸವಿಯಾದ ಹಗಲುಗನಸುಗಳಲ್ಲಿ ಮುಳುಗಿದ ನನ್ನ ಹೃದಯವು ಜಗತ್ತಿನ ವ್ಯಾಪಾರಗಳನ್ನೇ ಮರೆತು ಬಿಟ್ಟಿತ್ತು. ಅಂತೆಯೆ, ಆಗ ಬಾಹ್ಯಜಗತ್ತು ನನ್ನ ಪಾಲಿಗೆ ಅಂಧಕಾರಮಯವಾಗಿತ್ತು.

ಆತನನ್ನು ನಾನು ಚೆನ್ನಾಗಿ ಅರಿತಿದ್ದೆ; ಆದರೆ ಆತನ ಬಗ್ಗೆ ಹೆಚ್ಚಿನ ಸಂಗತಿಗಳಾವವೂ ನನಗೆ ಗೊತ್ತಿರಲಿಲ್ಲ. ಆಗ, ಆತನ ಸಹವಾಸ

ಸುಖದಲ್ಲಿಯೇ ನಾನು ನನ್ನೆ ಮರೆತಿದ್ದಾಗ, ಆತನ ಸ್ಥಿತಿಗತಿಗಳ ಬಗ್ಗೆ, ಆಗು–ಹೋಗುಗಳ ಬಗ್ಗೆ ಕೇಳಿಟ್ಟುಕೊಂಡಿರಬೇಕೆಂದು ನನಗೆ ತೋಚಲೇ ಇಲ್ಲ.

೧೫

ಈ ವರೆಗೆ ಒಮ್ಮೆಯೂ ನಾನು ಆತನಿಗೆ ಬರೆದಿಲ್ಲ. ಆತನ ವಿಳಾಸವನ್ನೇ ನಾನರಿಯೆ. ಆತನು ಕೂಡ ನನಗೆ ಬರೆಯಲಿಲ್ಲ. ಬಹಳ ಮಾಡಿ ಆತ ನನ್ನ ಬಗ್ಗೆ ಎಲ್ಲವನ್ನೂ ಮರೆತು ಬಿಟ್ಟಿರಬಹುದು! ಆತನಿಗೆ ಬೇರೆ ಹೊಸ ಗೆಳೆಯರೂ ದೊರೆತಿರಬಹುದು ! ಹೊಸ ಬಗೆಯ ಸುಖ–ಸಂತೋಷಗಳು ಆತನನ್ನು ಸುತ್ತುಮುತ್ತಿಕೊಂಡಿರಬಹುದು ! ಅಥವಾ ಯಾರು ಬಲ್ಲರು ! .... ಆತನು ಇಷ್ಟೊತ್ತಿಗೆ ಸತ್ತಿದ್ದರೂ ಇರಬಹುದು ! ....

ನಾನೂ ಸಹ ಬಲುದಿನಗಳ ವರೆಗೆ ಆತನನ್ನು ಮರೆತೇ ಬಿಟ್ಟಿದ್ದೆ. ಏನಾದರೇನು ! ಒಂದು ಬಗೆಯ ಆಂತರಿಕ ವೇದನೆಯು ನನ್ನ ಹೃದಯ ದಾಳದಲ್ಲಿ ಕುದಿಕುದಿದು ಸಳಮಳಿಸುತ್ತಿತ್ತು. ಈಗೀಗ ಆ ಎಸರಿನ ಬಿಸಿಯು ಮೇಲಕ್ಕೇರಿ ನನ್ನ ಜೀವಿತವನ್ನೇ ವ್ಯಾಪಿಸುತ್ತಿದೆ. ಅಂತೆಯೇ ಇಂದು, ನನ್ನ ಪ್ರೀತಿಯು ಆತನೇ ಬೇಕು ಬೇಕೆಂದು ಹಂಬಲಿಸಿ ಹಲುಬುತ್ತಿದೆ. ಅಂದಿನ ಆ ಸವಿ ನೆನಪುಗಳು ಇಂದು ನನ್ನ ಹೃದಯ ದಲ್ಲಿ ಹೊಕ್ಕು ಹಲವು ತರದ ಆಶೆಗಳನ್ನು ಉಕ್ಕಿಸುತ್ತಿವೆ. ನನ್ನ ಅಂತಃಕರಣವು, ಕೊನೆಗೂ ಮರೆಯಾದ ಆತನೆಡೆಗೆ ತನ್ನ ಚಿಕ್ಕ ಕೈ ಗಳನ್ನು ನೀಡಿನೀಡಿ ಕರೆಯುತ್ತಲಿದೆ. ಅದೇತಕ್ಕೋ ? ಏನೋ ? ನನ್ನ ಹೃದಯಗರ್ಭದಿಂದ ಹಲವು ತೆರದ ಆರ್ತಚೀತ್ಕಾರಗಳು ಮುಂದಮುಂದ ವಾಗಿ ಕೇಳಬರುತ್ತವೆ. ಆದರೆ ಅವು ಏನನ್ನು ಬೇಡುತ್ತಿವೆಯೋ

ಬಲ್ಲವರಾರು ! 'ಆತನು ಮಾತ್ರ ಈಗ' ನನ್ನೊಡನೆ ಇದ್ದರೆ ಸಾಕು' ಎಂದಿಷ್ಟೇ ಬಯಸುತ್ತಿದ್ದೇನೆ. ಆದರೆ, ಹಾಳು ಜೀವಾ! ಆತನನ್ನು ದೊರಕಿಸುವ ಬಗೆಯೆಂತು ?

೧೬

ಅಣ್ಣಾನು ಹೋದ ವರ್ಷ ತನ್ನ ಫ್ರೆಂಚ ಲೇಡಿಯೊಂದಿಗೆ ಹಿಂದಿರುಗಿದ್ದಾನೆ. ಅವನಿರುವದು ಕರಾಚಿಯಲ್ಲಿ. ಒಮ್ಮೆ ತಾನಿದ್ದಲ್ಲಿಗೆ ಒಂದು ಹೋಗೆಂದು ಅವನು ಬಿಟ್ಟುಬಿಡದೆ ಒತ್ತಾಯಪಡಿಸುತ್ತಿದ್ದಾನೆ. ತನ್ನ ಹೆಂಡತಿಗೆ ನನ್ನ ಗುರುತು ಮಾಡಿಕೊಡಬೇಕೆಂದು ಅವನ ಆತುರ . . . . 'ಅಣ್ಣಾನು ಈಗ ಅದೆಷ್ಟು ಸಂತೋಷದಲ್ಲಿ ಮುಳುಗೇಳುತ್ತಿರಬಹುದಲ್ಲ' ಎಂದು ನನಗೆ ನಾನೇ ಎಣಿಕೆ ಹಾಕುತ್ತೇನೆ. ಹಿಂದೊಮ್ಮೆ ನನ್ನ ಜೀವವು ನಂನಂಣಾನ ಸಹವಾಸಕ್ಕಾಗಿ ಕಾತರಿಸುತ್ತಿದ್ದುದೇನೋ ನಿಜ. ಆದರೀಗ ಅವನ ಸುಖದಲ್ಲಿ ನಾನು ಮೊದಲಿನಂತಹ ಸಂತಸವನ್ನು ಪಡೆಯಬಲ್ಲೆನೆ! ಅಣ್ಣಾನಿಂದ ನನಗೆ ಈಗ ಏನಾಗಬೇಕಾಗಿದೆ ! ಅವನು ನನ್ನ ಪಾಲಿಗೆ ಬರೀಬಯಲು,-ಗಾಳಿ!! ಮೊನ್ನೆಮೊನ್ನೆ ಪ್ರಸಿದ್ಧಿಸಿದ 'ಪಿಪಾಸಾ' ಎಂಬ ತನ್ನ ಕವಿತೆಗಳ ಪುಸ್ತಕವನ್ನು ಅಂಣಾನು ನನಗೇ ಕಾಣಿಕೆ ಮಾಡಿದ್ದಾನೆ. ಆ ಹಾಳು ಹಾಡು ಯಾರಿಗೆ ಬೇಕಾಗಿತ್ತು! ಅದರಿಂದ ನನ್ನ ಪಿಪಾಸೆ ಮಾತ್ರ ಹೆಚ್ಚುತ್ತಲೇ ಇದೆ.

ನಂನಂಣಾನು ಇಲ್ಲದಾಗ '**ಆತನು**' ನನ್ನ ಜೀವನದ ಕೊರತೆಯನ್ನು ನೀಗಿಸಿದ್ದ. ಆದರೀಗ, ಆತನು ಇಲ್ಲದ್ದಕ್ಕೆ ಕಳವಳಿಸುವ ನನ್ನೆದೆಯ ಕೊರಗನ್ನು ನಂನಂಣಾನು ನಿಲ್ಲಿಸಬಲ್ಲನೆ! ನಂನಂಣಾನು ಹಲವು ದಿನ ನನ್ನ ಬಳಿಯಲ್ಲಿದ್ದಾಗ ಬಾರದ ಒಂದು ಆನಂದವನ್ನು

ಆತನು ಕೆಲವು ದಿನಗಳಲ್ಲಿ ನನಗೆ ತಂದಿತ್ತನು. ಅಂಥ ಆನಂದದ ಅನು ಭೂತಿಯನ್ನು ಒಮ್ಮೆ ಪಡೆದ ಮೇಲೆ ನನ್ನ ಜೀವವು ಬಿಕ್ಕ ಸಂತಸ ಗಳಿಂದ ಹೇಗೆ ತಣಿವುಗೊಳ್ಳಬಹುದು !

೧೭

ಈ ಸಲ ನಮ್ಮ ಕುಟುಂಬವು ಮತ್ತೊಮ್ಮೆ ಸೈನಿತಾಲಕ್ಕೆ ಹೋಗಿದ್ದಿತು. ನನಗೂ ಹೋಗಿ ಬಡಬೇಕೆಂಬ ಹಂಬಲ ಎಳೆಯಿತು. ಆದರೆ ಧೈರ್ಯ ಸಾಲಲಿಲ್ಲ. ಅಲ್ಲಿಯ ಸೌಂದರ್ಯನಿವಾಸಗಳನ್ನು ನೋಡಿ, ನಾನು ಅನುಭವಿಸಿದ ಆನಂದದ ಪ್ರಸಂಗಗಳನ್ನು ನೆನೆಸಿ, ನನ್ನೆದೆಯು ತಾಳಿ ಬಾಳಬಲ್ಲುದೇ ? . . ಅದಕ್ಕಾಗಿಯೇ ಒಲ್ಲೆನಿಸಿ ದರೂ ಅಕ್ಕನೂರಿಗೆ ಹೋಗಿ ಬಿಟ್ಟೆ.

೧೮

ತಂದೆಯವರು ಮೊನ್ನಿನ ಶರತ್ಕಾಲದಲ್ಲಿ ತೀರಿಹೋದರು. ಈಗ ಈ ನಮ್ಮ ರಣಗುಟ್ಟುವ ಮನೆಯಲ್ಲಿ ನಾನೇ ನಾನು ! ಇದನ್ನು ಬಿಟ್ಟರೆ ಎಡೆಯೆಲ್ಲಿ ? ಇನ್ನೆಂದಿಗೂ ನನ್ನವರಾಗದ ಅಕ್ಕನೊಡನಾಗಲಿ ಅಣ್ಣನೊಡನಾಗಲಿ ಇರುವುದು ಆಗದ ಮಾತು ! ಎಲ್ಲರಂತಹ ಆನಂ ದವು ನನ್ನ ಪಾಲಿಗೂ ಒಂದಿದ್ದರೆ, ಎಂದೆಂದಿಗೂ ‘ **ಆತನು** ’ ನನ್ನ ವನಾಗಬಹುದಿತ್ತು ! ಆದರೀಗ ಆತನನ್ನೇ ಕಳೆದುಕೊಂಡು ಬಿಟ್ಟಿರು ವೆನಲ್ಲ ! ಅಂತೆಯೆ, ಜೀವವನ್ನು ಕಂಗೆಡಿಸುವ ಈ ಕತ್ತಲೆಯು ನನ್ನದು ! ಅಸಂಬದ್ಧವಾಗಿ ಪ್ರಲಪಿಸುವ ಈ ನನ್ನ ಹೃದಯದ ಬಡ ಬಡಿಕೆಗಳೂ, ಕೊನೆಮೊದಲಿಲ್ಲದ ಈ ಮನಸ್ಸಿನ ಚಡಪಡಿಕೆಗಳೂ ನನ್ನವು. ನಾನು ಅನುಭವಿಸಿದ ಆನಂದವೇ ಭೂತವಾಗಿ ಬಂದು ಕಲ್ಪನೆಯನ್ನು ಕೆಣಕಿ ಅಣಕಿಸುತ್ತ ಕುಣಿಯುವಂತೆ ನಂನ ಕಂಣೆದು

ರಿಗೆ ಸುಳಿಯುವ ಈ ಹಲವು ತರದ ವಿಕೃತಾಕೃತಿಗಳೂ ನನ್ನವು;— ಇವುಗಳೆಲ್ಲಾ ನನ್ನವು. ಆಗರೂ ನನ್ನ ಹೃದಯವು ಕಳೆದು ಹೋದ ಮಾಧುರ್ಯಕ್ಕಾಗಿ ಹಂಬಲಿಸದಿರಲೊಲ್ಲದು. ಆಗ ಈ ಜೀವನವೂ ಜಗತ್ತೂ ಎಷ್ಟು ಸುಂದರವಾಗಿದ್ದುವಲ್ಲ! ಆಗ ಆ ಅಮೃತಪಾನ ಮಾಡಿದ ನನಗೆ ಈಗ ಈ ವಿಷವೆ! ನನ್ನ ಪಾಲಿಗೆ ಆ ಅಮೃತದ ಬದಲಾಗಿ ಈ ವಿಷವೇ ಅಮರವಾಗಿದೆ.

೧೯

ಕವಿತೆಯೆಂದರೇ ನನಗೀಗ ಆಗದು. ಕವಿತೆಗಳನ್ನೇಕೆ ಬರೆದೆನೋ ಎಂದು ನನ್ನನ್ನೇ ನಾನು ಹಳಿದುಕೊಳ್ಳುತ್ತೇನೆ. ಆದರೆ, ನನ್ನಲ್ಲಿಯ ಕಾವ್ಯದಾವೇಗವು ಇನ್ನೂ ಇಳಿದಿಲ್ಲ. ಅದರ ಸೆಳವಿಗೆ ಸಿಕ್ಕು ನಾನು ಒಮ್ಮೊಮ್ಮೆ ಪಡಲಾಗದ ಕಷ್ಟ ಪಡುತ್ತೇನೆ. ನನ್ನ ಕಲ್ಪನೆಯು ಭಾವನೆಗಳ ಆವೇಶಕ್ಕೆ ಬಲಿಯಾಗಿ ಭ್ರಮಿಸುವಾಗ, ನನಗೆ ಹುಚ್ಚಾದರೂ ಹಿಡಿಯಬಾರದೇ ಎಂದು ತಳಮಳಿಸುತ್ತೇನೆ. ನನ್ನ ಹೃದಯವು ಆಷಾಢದ ಬೀಸುಗಾಳಿಗಳಂತೆ ಆಸೆಗೆಟ್ಟು ದೆಸೆದೆಸೆಗೆ ಹರಿಯುತ್ತದೆ. ಇದೇನೋ ನನ್ನ ಹುಚ್ಚು! ಇಷ್ಟಾದರೂ ನನ್ನ ಹಂಬಲವು ದೊರಕದ್ದನ್ನು ದೊರಕಿಸಲು ಹಾತೊರೆಯದಿರಲೊಲ್ಲದು. ಆ ಹಂಬಲದ ಹೊಟ್ಟೆಯಲ್ಲಿ ಈಗಲೂ ಒಂದು ಆಸೆಯು ಹಣಕುತ್ತದೆ:

"ನನ್ನಂತೆಯೇ ಆತನೂ ಕೂಡ, ನನ್ನ ಪ್ರೀತಿಗಾಗಿ ಕಾತರಿಸುತ್ತಿದ್ದಾನು! ಮುಂದೆ ಎಂದಾದರೊಮ್ಮೆ ನಾವಿಬ್ಬರೂ ಕೂಡಿಕೊಂಡೇವು! ಆಗ ಇಂದಿನ ಈ ಕಣ್ಣೀರ ಮೋಡಗಳ ಕಗ್ಗತ್ತಲೆಯನ್ನು ಮೀರಿ, ನಾನು ಜೀವನದ ಆನಂದದ ಬೆಳಕನ್ನು ಕಂಡೇನು!" ಎಂಬ ಹುಚ್ಚು ಎಣಿಕೆಗಳಿಗೆ ಮೊರೆಹೋಗಿ, ಬಾರದ ಭಾಗ್ಯಕ್ಕಾಗಿ ಹಾತೊ

ರೆದು ದಾರಿಕಾಯುತ್ತಿದ್ದೇನೆ. ಆದರೇನು? ಎಂದಿಗೂ ಈ ಆಸೆ ತೀರು
ವಂತಿಲ್ಲ; ನಾನು ತೀರವನ್ನು ಕಾಣುವಂತಿಲ್ಲ!

೨೦

ಇಂತು, ನನ್ನ ಆಸೆಗಳನ್ನು ಎತ್ತೆತ್ತಲೋ ಹರಿಬಿಡುತ್ತಿರು
ವದೇ ನನ್ನ ಈಗಿನ ಹಿರಿಗೆಲಸ. “ನನ್ನ ಬಾಳು ಈಗೊಂದು ಹಾಳು
ಗನಸು! ಆತನದೊ ಒಂದು ಬರೀ ನೆನಪು ಮಾತ್ರ! ಈ ದಿನಗಳೊ
ತುಂಟ ಹುಡುಗರಂತೆ ನಿಟ್ಟುಗೆಟ್ಟು ಓಡುತ್ತಿವೆ. ನನ್ನ ಪಾಲಿಗೆ ಜೀವನ
ವೊಂದು ಮಂಜಿನ ನೆರಳು; ಮಾನವರು ಮಾಟದ ಗೊಂಬೆಗಳು;
ಇಂಥ ಗುಳ್ಳಿ ಎಣಿಕೆಗಳನ್ನು ತೇಲಿಸುತ್ತ, ದೂರದ ಮುಸಕಿನಲ್ಲಿ ಮುಸ
ಣಿಸಿದ ಮುಗಿಲಿನಂಚಿನಲ್ಲಿ ಕಣ್ಣಿಟ್ಟು ದಿಟ್ಟಿಸುತ್ತಿರುವಾಗಲೆಲ್ಲ, ನನ್ನ
ಹೃದಯವು ಶೆಲೆ (Shelley) ಯ ಈ ಗೀತಗಳನ್ನೇ ಜಪಿಸು
ತ್ತಿರುವದು:

‘ಜೀವನದ ನಸುಕಿನಲಿ ನವಿಗನಸಿನೊಲು ಒಂದು
ನಡುಹಗಲ ಮುನ್ನವೇ ಜಾರಿದನು ನೆಳಲಿನಂತೆ;
ಹೃದಯ-ಶಾಂತಿಯು ಒಡಲು ಉರಿದುರಿದು ಕಮರುತಿರೆ
ಬೆಂಡಾಗಿ ಬಾಡುವೆನು ಕಳೆಗೆಟ್ಟ ಚಂದ್ರನಂತೆ!

ಆತನೀ ದುರ್ಭರದ ಚಿರವಿರಹ-ಯಾತನೆಯು
ಕಿಚ್ಚುರಿವ ಕೆಂಡಗಳ ತುಂಬಿಹನು ನನ್ನುಡಿಯಲಿ;
ಇನ್ನು, ಎದ್ದೇಳೆನ್ನ ನವಿನೆನಪೆ! ಅಂದಿನಾ
ಇನಿಗನಸುಗಳ ನೆನೆದು ನನ್ನೆದೆಯು ಬಿರಿದೊಡೆಯಲಿ!’



# ಆ ಮಗು !

ನಾನು, ಮದುವೆ ಮದುವೆ ಎಂನುವದರೊಳಗೆ ಏಥವೆಯು ಆಗಿ ಬಿಟ್ಟಿದ್ದೆ. ಅದೆಲ್ಲ ಏನೋ ಒಂದು ಕನಸಿನ ಕಂಚುಮಿಂಚಿನ ಮಾಯೆ ಯೆಂಬಂತೆ ನನಗೆನಿಸಿ ಬಿಟ್ಟಿತು. ಮುಂದೆ ಬರುವ ಆನಂದದ ದಾರಿ ನೋಡುತ್ತಿರುವಾಗಲೆ ಆ ಆನಂದದ ನೆರಳು ನನ್ನನ್ನು ಏರಿ ಹೋಗಿ ಬಿಟ್ಟಿದ್ದಿತು. ಸಿಲ್ಲದೂರಿನ ಮುಂದೆ ಮೇಲುಗಾಡಿ ಭರ್ರನೋಡಿ ದೂರದಲ್ಲಿ ಅಡಗಿ ಕಾಣದಾಗುವಂತೆ ನನ್ನ ಸುಖವು ಮಿಂಚಿಹಿಂಚಿ ಹೋಗಿತ್ತು.

ನಾನು ಕುಲವಂತರ ಮಗಳು. ಕಲಿತಾಕೆ. ಮದುವೆಯ ಮುಂದೆ ನಾನು ಮ್ಯಾಟ್ರಿಕ್ ಪರೀಕ್ಷೆಗೆ ಕೂತಿದ್ದೆ; ಇಳಿದಿರಲಿಲ್ಲ. ಆದರೂ ನನಗೆ ನಮ್ಮೂರ ಹೆಣ್ಣುಮಕ್ಕಳ ಸಾಲೆಯಲ್ಲಿ ಜಾಗ ಸಿಕ್ಕಿತ್ತು. ಅಲ್ಲದೆ ಗಂಡನಿಂದಲೂ ತಂದೆಯಿಂದಲೂ ಕೆಲವೊಂದು ಹಣ ಬಂದಿದ್ದಿತು. ನಾನೇನೋ ತುಸು ನನ್ನನ್ನೇ ನಂಬಿಕೊಂಡಿ ರುವವಳು. ಆದುದರಿಂದ ನಾನು ಗಳಿಸಹತ್ತಿದ ಮೇಲೆ ಬೇರೊಂದು ಮನೆ ಗೊತ್ತು ಮಾಡಿಕೊಂಡು ಸ್ವತಂತ್ರಳಾಗಿ ನಾನೊಬ್ಬಳೇ ಇದ್ದೆ. ನನ್ನ ಕಕ್ಕನ ಬಳಿಯಿರುವುದು ನನಗೆ ಇಷ್ಟವಿರಲಿಲ್ಲ. ಮನೆಯ ಹಾಗೂ ಸಾಲೆಯ ಕೆಲಸಗಳೆರಡೂ ನನ್ನ ಮೈಮನಗಳನ್ನು ತುಂಬಿ ದ್ದವಾದರೂ, ನನ್ನ ಬಾಳಿನಲ್ಲಿ ಉಂಟಾದ, ಆ ದೊಡ್ಡ ಕೊರತೆಯು ನನ್ನೆದೆಯನ್ನು ಕೊರೆಯುತ್ತಲೇ ಇದ್ದಿತು.

ನಾನು ಕಲಿತವಳು ಎಂದೆನಲ್ಲ! ಆ ಕಲಿತ ಹೆಣ್ಣುಮಕ್ಕಳಿಗೆ ಒಪ್ಪುವಂಥ, (ಅಥವಾ ನಮ್ಮ ಸಮಾಜಗಳ ಮುಂದುಕರು ಹೆಸರಿ

ಡಲು ತಕ್ಕವಾದ, ) ಹೊಸಬಗೆಯ ವಿಚಾರಗಳು ನನ್ನಲ್ಲಿ ತುಂಬಾ ಇದ್ದವು. ಸಾಮಾಜಿಕ, ಧಾರ್ಮಿಕ, ರಾಜಕೀಯ, ಸುಧಾರಣೆಯ ವಿಚಾರಗಳು ನನಗೆ ತಿಳಿಯುತ್ತಿದ್ದವು. ಆ ಬಗೆಗೆ, ಹಲವು ಗ್ರಂಥ ಗಳನ್ನು ಓದಿಯೂ ಇದ್ದೆ. ನಾನು ಆ ದಾರಿಯಲ್ಲಿ ವಿಚಾರ ಮಾಡು ತ್ತಲೂ ಇದ್ದೆ. ಬಹಳ ಮಟ್ಟಿಗೆ ಹೊಸ ದಾರಿಯ ಹೊಸ ಬಗೆಯ ವಿಚಾರಗಳಿಗೂ ಆಚಾರಗಳಿಗೂ ನಾನು ಒಪ್ಪುತ್ತಿದ್ದೆ.

ಪುನರ್ವಿವಾಹದ ಬಗೆಗೆ, ಅಂತೆಯೇ, ನನಗಾವುದೊಂದೂ ಆಕ್ಷೇಪಣೆಯಿರಲಿಲ್ಲ. ಅಷ್ಟೇಯಲ್ಲ. ಅದು, ಅವಶ್ಯವೂ ಯೋಗ್ಯವೂ ಎಂದು ನನ್ನ ಮತ. ಆ ಬಗೆಗೆ ಜಗತ್ತಿನ ಸುಧಾರಕರ ಸುವಿಚಾರ ಗಳಿಗೆ ನನ್ನ ಬುದ್ಧಿಯ ಬೆಂಬಲವೂ ಇದ್ದಿತು; ನನ್ನ ಹೃದಯವು– ತಾನು ಅನುಭವಿಸುತ್ತಿದ್ದ ಯಾತನೆಗಳ ಮೂಲಕ ಒಪ್ಪಿಗೆಯನ್ನೂ ಕೊಡುತ್ತಿದ್ದಿತು.

ಆದರೆ ನಾನೆಂದೂ ಮರಳಿ ಮದುವೆ ಮಾಡಿಕೊಳ್ಳಲಿಲ್ಲ. ಬ್ರಾಹ್ಮ ಣಳಾಗಿದ್ದುದರಿಂದ ಹೆದರಿದೆನೆಂದಲ್ಲ. ಆದರೆ ನಾನು ಆ ಕಾರ್ಯ ವನ್ನು ಮಾಡಿಯೇ ತೀರಬೇಕೆಂಬ ಉತ್ಸಾಹವಾವುದೂ ಬರಲೇ ಇಲ್ಲ. ಅಲ್ಲದೆ, ನನ್ನ ಹೃದಯವೆಲ್ಲ, ಕಳೆದುಹೋದ ಆನಂದವನ್ನೇ ನೆನೆಯುತ್ತ, ಮರುಗುತ್ತ ಕೊರಗುತ್ತಲೂ, ಬೆರಗುಬಡುತ್ತಲೂ ಹುಚ್ಚು ಹುಚ್ಚಾಗಿ ಬಿಟ್ಟಿದ್ದಿತು. ನನ್ನ ಹೃದಯದ ಪ್ರೀತಿಯು ಅರಳಿ ಮಗಮಗಿಸುತ್ತಿದ್ದುದೇನೋ ನಿಜ. ಆದರೆ, ಅದಕ್ಕೆ, ಅದೇಕೋ ಬೇರೊಬ್ಬರಾರಾದರೂ ಬೇಕೇಬೇಕು ಎನಿಸುತ್ತಿರಲಿಲ್ಲ. ಬಂದರೆ ಬೇಡವೆನ್ನುವಂತೆಯೇನಿರಲಿಲ್ಲ. ಆದರೆ ಬಂದರೇ ಸರಿ ಎಂಬ ಹಟವಿರ ಲಿಲ್ಲ. ಅದೇತಕೆಂದರೆ, ನನ್ನ ಹೃದಯವು ಚೆನ್ನಾದುದಾವುದನೆ ಆದರೂ

ತಾನೇ ತಾನಾಗಿ ತನ್ನೊಲವಿನಿಂದ ಮನವುಟ್ಟಿ ಪ್ರೀತಿಸಬಲ್ಲು ದಾಗಿತ್ತು.

ಇದಕ್ಕಾಗಿಯೇ ಇರಬಹುದು, ನಾನು ಮತ್ತೊಮ್ಮೆ ಮದುವೆ ಮಾಡಿಕೊಳ್ಳಲಿಲ್ಲ. ಇಂಥ ಮಾತುಗಳಲ್ಲಿ ಇದು ಇದರ ಕಾರಣವು ಹೀಗೆ ಹೀಗೆ ಎಂದು ಯಾರಿಗೆ ಹೇಳಲು ಬರಬಹುದು! ಅಂತೆಯೆ 'ಇರ ಬಹುದು' ಎಂದೆ. ಹೀಗೆಂದ ಮಾತ್ರಕ್ಕೆ ಇನ್ನೊಂದು ಮದುವೆಯ ವಿಚಾರ ನನಗೆ ಬರಲೇ ಇಲ್ಲವೆಂತಲ್ಲ. ಬಂದಿದ್ದರೂ ಅದಕ್ಕೆ ಸ್ಥಿತಿ ರೂಪುಗಳಿರಲಿಲ್ಲ.

ಹೀಗೆ ನಾನು ಈ ವರೆಗಂತೂ ಇನ್ನೊಂದು ಮದುವೆ ಮಾಡಿ ಕೊಂಡಿಲ್ಲ. ಮತ್ತೀಗ ಆ ವಿಚಾರ ನನ್ನನ್ನು ಕಾಡುತ್ತಲೂ ಇಲ್ಲ. ಕೆಲವು ದಿನಗಳವುಟ್ಟಿಗೆ ಈ ಕಾಟವಿದ್ದುದೇನೋ ನಿಜವೇ! ಆದರೆ, ಮುಂದೆ ನನಗೆ ಮದುವೆ, ಗಂಡ, ಗಂಡಸು ಎಂಬ ಮಾತುಗಳ ಮೋಹವೇ ತಪ್ಪಿತೆನ್ನಬೇಕು. ಏತಕೆಂದರೆ ನನಗೆ ವಯಸ್ಸು ಹೆಚ್ಚುತ್ತ ಬಂದಂತೆ ನನಗೆ ಮಕ್ಕಳ ಮೇಲೆ ಆಸೆ ಬಲಿಯುತ್ತ ಬಂದಿತು. ಎಲ್ಲಿ ಯಾವಾಗ ನೋಡಿದರೂ ನನಗೆ ಮಕ್ಕಳ ಮೇಲೆಯೇ ಕಣ್ಣು. ಎಂಥ ಮಕ್ಕಳನ್ನೂ ಕಂಡರೆ ನನಗೆ ಅಷ್ಟು ಅಕ್ಕರೆ. ಗಂಡನಿಲ್ಲದಿದ್ದರೂ, ನಾನು ಅಷ್ಟು ದಿನ ಹೆಂಡತಿಯಾಗಿಯೇ ಇದ್ದಂತೆ, ನಾನೀಗ ಮಕ್ಕ ಳಿಲ್ಲದಿದ್ದರೂ ತಾಯಿಯಾಗಿದ್ದೆ.

ಈಗ ಮಾತು ಬಂದಿದ್ದು ಹೀಗೆ—ನಾನೊಬ್ಬಳೆ ಒಂದು ಮನೆ ಯಲ್ಲಿ ಸ್ವತಂತ್ರಳಾಗಿ ಇರುತ್ತಿದ್ದೆನೆಂದು ಹೇಳಿರುವೆನಲ್ಲ. ನನ್ನ ಮನೆಯೆದುರಿಗೆ ನಮ್ಮೂರ ಮುನಸೀಫರ ಮನೆ. ಅವರ ಮನೆಯಲ್ಲಿ ತುಂಬಾ ಮಕ್ಕಳು. ಆ ಮಗುಗಳ ತಾಯಿ ಬಹಳ ಒಳ್ಳೆಯವಳು.

ವಾತ್ಸಲ್ಯದಾಕೆ. ಯಾವಾಗಲೂ ಮಕ್ಕಳನ್ನು ಸುತ್ತುಗಟ್ಟಿಕೊಂಡೇ ಇರುತ್ತಿದ್ದಳು. ತನ್ನನ್ನು ಸುತ್ತಿಮುತ್ತಿರುವ ಚಿಕ್ಕೆಗಳಿಂದೊಡಗೂಡಿದ ಚಂದ್ರಾಮನಂತೆ ಆ ಹೆಂಗಸು ನನ್ನ ಕಣ್ಣಿಗೆ ತೋರುವಳು. (ಆ ಮನೆಗೆ ಅವರು ಹೊಸದಾಗಿ ಬಂದುದರಿಂದ ಅವಳೊಡನೆ ನನ್ನ ಪರಿಚಯವಿರಲಿಲ್ಲ. ಅಲ್ಲದೆ ನಾನು ಹೆರವರ ಮನೆಗೆ ಮೇಲಿಂದ ಮೇಲೆ ಹೋಗುತ್ತಲೇ ಇರಲಿಲ್ಲ.) ಹಾಗೆ ತನ್ನಕ್ಕರೆಯ ಮಗುಗಳಿಂದ ಬಳೆಸಿ ನಿಂತಿರುವ ಆಕೆಯನ್ನು ದೂರದಿಂದ ನನ್ನ ಮನೆಯ ಬಾಗಿಲಲ್ಲಿ ಕುಳಿತೇ ನೋಡುತ್ತಿರಬೇಕೆಂದು ನನ್ನ ಹಿರಿದಾದ ಆಸೆ. ಹಾಗೆ, ನಾನೆದೆಷ್ಟೋ ಹೊತ್ತು ನೋಡುತ್ತ ನಿಂತುಕೊಂಡೆನೆಂದರೆ, ನಾನು ಆ ಹೆಣ್ಣುಮಗಳೊಡನೆ ಬೆರೆತು ಒಂದೇಯಾಗಿ ಬಿಟ್ಟಂತೆನಿಸಿ, ಅವಳ ಮಗುಗಳು ಹೇಗೋ ನನ್ನ ಬಳಿಸಾರಿ ಸುತ್ತುಗಟ್ಟಿ ನಿಂತಿರುವಂತೆ ಭಾಸವಾಗುವದು.

ಆವಳಿಗೊಂದು ಮೊಲೆಗೂಸು. ಅಥವಾ ಅದೇ ಮೊಲೆಯನ್ನು ಬಿಟ್ಟಿರಲೂ ಬಹುದು. ವಯಸ್ಸು ವರ್ಷವಂದೂವರೆಯಾಗಿರಬಹುದು, ಅಷ್ಟೆ; ಅದೇನು ಹೆಂಣೊ ಗಂಡೋ ಎಂಬದನ್ನೂ ಮೊದಲು ನಾನರಿತಿರಲಿಲ್ಲ. ಹೆಸರಂತೂ ಕೇಳಿರಲೇ ಇಲ್ಲ. ಆದರೆ ಆ ಮಗುವನ್ನು ಮಾತ್ರ ತಪ್ಪದೆ ದಿನವೆಲ್ಲ ನೋಡುತ್ತಲೇ ಇದ್ದೆ. ಕೈಯಲ್ಲಿ ತನ್ನ ಅಂಗಿಯನ್ನಾಗಲಿ ಟೊಪ್ಪಿಗೆಯನ್ನಾಗಲಿ ಹಿಡಿದುಕೊಂಡು, ಇಲ್ಲವೆ ಒಂದು ದಂಟನ್ನೊ ಕಟ್ಟಿಗೆಯನ್ನೊ ಎತ್ತಿಕೊಂಡು, ಇಲ್ಲವೆ ತನ್ನ ಅಣ್ಣಂದಿರನ್ನೊ ತಂದೆಯನ್ನೊ ಹಿಂಬಾಲಿಸಿ, ಇಲ್ಲವೆ ತನ್ನ ತಾಯಿ ಸೆರಗನ್ನು ಅವಚಿಕೊಂಡು ಆ ಮಗುವು ಮುದ್ದು ಮುದ್ದಾಗಿ ಮೇಲಿಂದಮೇಲೆ ಬಾಗಿಲಲ್ಲಿ ಒಂದು ನಿಲ್ಲುತ್ತಿತ್ತು. ಅದು ತಪ್ಪಿದರೆ,

ತಾಯಾಗಲೀ ತಂದೆಯಾಗಲೀ ಆಳುಗಳಾರೇ ಆಗಲಿ ಅದನ್ನು ಬಾಗಿ ಲಲ್ಲಿ ಎತ್ತಿಕೊಂಡು ನಿಂತು ಆಡಿಸುತ್ತಿದ್ದರು. ಹೀಗಿರುವಾಗ ಆ ಮಗುವನ್ನೇ ನೋಡುತ್ತ ಕುಳ್ಳಿರುವದು ನನಗೊಂದು ಕಣ್ಣಹಬ್ಬ. ಶಾಲೆಗಾಗಲಿ, ಇನ್ನಾವ ಕೆಲಸಕ್ಕಾಗಲೀ ಮನೆಬಿಟ್ಟು ಹೊರಗೆ ಹೋಗುವುದೆಂದರೆ ನನಗೆ ಜೀವದಲ್ಲಿ ಹೇಗೆ ಹೇಗೋ ಆಗುತ್ತಿತ್ತು.

ಆ ಮಗುವು ತುಸು ಅಳುಬುರುಕಾಗಿದ್ದಿತೇನೋ! ಮೇಲಿಂದ ಮೇಲೆ ಅದರ ಅಳುದನಿಯು ನನ್ನ ಕಿವಿಗಳನ್ನು ಹೊಕ್ಕು ಅದೇನೋ ಒಂದು ಬಗೆಯ ಕೋಲಾಹಲವನ್ನೆಬ್ಬಿಸಿಬಿಡುತ್ತಿದ್ದಿತು. ಅದರ ನಗೆಯಾಟ ಕೂಗಾಟ ಚೀರಾಟ ಹಾರಾಟಗಳು ನನಗೊಂದು ಬಗೆಯ ಸಂತಸವನ್ನೂ ಇನ್ನೊಂದುಬಗೆಯ ಮರುಕವನ್ನೂ ಉಂಟು ಮಾಡುತ್ತಿದ್ದವು. ಹಾಗೆಯೆ ಅದರ ಅಳುವು ಒಂದು ಬಗೆಯ ಕಸಿ ವಿಸಿಯನ್ನೂ ಇನ್ನೊಂದು ಬಗೆಯ ಹರುಷವನ್ನೂ ಉಂಟು ಮಾಡು ತ್ತಿದ್ದವು. ನಾನೊಮ್ಮೆ ಒಳಗೆ ಮನೆಗೆಲಸದಲ್ಲಿದ್ದಾಗ ಆ ಮಗುವಿನ ಅಳುವನ್ನು ಕೇಳಿದೊಡನೆ ನನ್ನ ಕರುಳು ಒಮ್ಮೆಲೆ ಚೇತನಗೊಳ್ಳು ತ್ತಿತ್ತು. ಒಡನೆಯೆ ಬಾಗಿಲಿಗೆ ಒಂದು ಆ ಮಗುವು ಕಾಣುವಂತಿ ದ್ದರೆ, ಅದರ ದನಿಯನ್ನೇ ಕೇಳುತ್ತ, ಕೈಗೆಲಸಗಳನ್ನೆಲ್ಲ ಬಿಟ್ಟು ಆ ಮಗುವಿನ ರೂಪನ್ನು ಕಣ್ಣೆದುರು ಕಲ್ಪಿಸಲು ಹವಣಿಸುತ್ತಿದ್ದೆ. ಆದರೆ ಒಂದೊಂದು ದಿನ ಕೂಸು ಅಳುತ್ತಿರಲೇ ಇಲ್ಲ. ಆಗ ಮಾತ್ರ ನನ್ನೆದೆಯು ಒಳಗಿಂದೊಳಗೆ ಅಳುತ್ತಿದ್ದಿತೇನೋ.— ಒಂದು ಇರಿವೆ ಯಾದರೂ ಕಡಿದು, ಆ ಮಗುವು ಅಳಬಾರದೇ ಎನ್ನಿಸುತ್ತಿತ್ತು. ಅದೆಂ ತಹದೋ ನನ್ನ ಸ್ವಾರ್ಥ!

ಆ ತಾಯಿಗೆ ನಾಲ್ಕೈದು ಮಕ್ಕಳಾದವೆಂದು ಬೇಸರವೇನು

ಆಗಿರಲಿಕ್ಕಿಲ್ಲ. ಆದರೂ ಅವಳು ಆ ಮಗುವನ್ನು ಅಳಿಸುತ್ತಿದ್ದಳೆಂದು ನಾನು ಬಲ್ಲೆ. ಅವಳ ಬದಲು ನಾನೇ ಆ ಕೂಸಿನ ತಾಯಾಗಿದ್ದರೆ, ಅದರ ಕಣ್ಣಿಂದ ಒಂದು ಹನಿ ಒಮ್ಮೆ ಕೂಡ ತಟಕ್ಕೆನ್ನದಂತೆ ನೋಡಿ ಕೊಳ್ಳಬಹುದಲ್ಲ ಎಂದೆಂದು ಹೆಮ್ಮೆಪಡುತ್ತಿದ್ದೆ. ಆ ತಾಯಿ, ಹೇಗೆ ತಪ್ಪಿದರೂ ಹೆಳಲು ಹಾಕುವ ನೆವದಿಂದ ಅದನ್ನು ತಪ್ಪದೆ ಅಳಿಸುತ್ತಿದ್ದಳು. ಅದಕ್ಕೆ ಹೆಳಲು ಹಾಕಿಸಿಕೊಳ್ಳುವದೆಂದರೆ ಮೊದಲೇ ಬೇಡ. ಆ ಮಾತಿನಲ್ಲಿ ತಾಯಿಗಿಂತ ಆ ಮಗುವೇ ಹೆಚ್ಚು ಜಾಣವಾಗಿರಬೇಕು. ಅದರ ಕುರುಳುಗೂದಲುಗಳು ಕೊನರುಗಳಂತೆ ಗಾಳಿಗೆ ತಲೆಯನ್ನು ಬಳಸಿ ಹಾರಾಡುವಾಗ ಅದೆಷ್ಟೋ ಮುದ್ದು ಬರುವದು. ಮುಂಗೂದಲುಗಳು ಕಣ್ಣು ಬಾಯಿಗಳ ಮೇಲೆ ಬರಲು ಅದು ತನ್ನ ಪುಟ್ಟ ಪುಟ್ಟ ಕೈಗಳಿಂದ ಅವನ್ನು ಹಿಂದೆ ಸರಿಸಿ ಓರಣಿಸುವ ಬನವು ಬಲು ಅಂದವಾಗಿರುವದು. ಆದರೆ ಆ ತಾಯಿ ಯಾವ ಸೌಂದರ್ಯ ಶಾಸ್ತ್ರವನ್ನು ಓದಿದ್ದಳೋ—ಮತ್ತೆಮತ್ತೆ ಅದರ ಕೂದಲನ್ನು ಬಾಚಿ, ಒಲ್ಲೆಂದರೂ ಹೆಳಲು ಹಾಕಿ ಅದನ್ನು ಅಳಿಸೇ ಅಳಿಸುತ್ತಿದ್ದಳು. ಹೀಗೆ ಬಿಚ್ಚುಬೀಸಾಗಿ ಇರಲು ಹಾರೈಸುವ ಕೂದಲನ್ನು ಕಟ್ಟುವದರೊಡನೆ ಅವಳು ಆ ಮಗುವಿನ ಸ್ವಾತಂತ್ರ್ಯಕ್ಕೂ ಕಟ್ಟುಹಾಕಿ ಬಿಡುತ್ತಿದ್ದಳು. ಹೀಗೆ ಆ ಮಗುವನ್ನು ಅಳಿಸುವದರಿಂದ, ಅದರ ಮೇಲಿದ್ದ ತನ್ನ ಅಧಿಕಾರವನ್ನು ತನಗೂ ನೋಡುವವರಿಗೂ ಆ ತಾಯಿ ಗಟ್ಟಿಮಾಡಿ ತೋರಿಸುತ್ತಿದ್ದಳೇನೋ! ತಾಯಂದಿರಿಗೆ ಇದೊಂದು ಹೆಮ್ಮೆಯಿರಬಹುದು.

ಆದರೂ, ಒಂದು ಪರಿಯಾಗಿ ಆ ಮಗುವಿನ ಅಳುವು ನನಗೆ ಪ್ರಿಯವಾಗಿದ್ದಿತಾದ್ದರಿಂದ ನಾನು ಆ ತಾಯಿಗೆ ಮಗುವನ್ನಳಿಸು

ತ್ತಿದ್ದುದಕ್ಕಾಗಿ ಅನೇಕ ಧನ್ಯವಾದಗಳನ್ನು ಅರ್ಪಿಸಲೇಬೇಕು.

ಒಮ್ಮೊಮ್ಮೆ ಆ ಮಗುವು, ನನ್ನನ್ನು ದೂರದಿಂದಲೆ ನೋಡಿ ತನ್ನ ಚಿಕ್ಕಚಿಕ್ಕ ಕೈಗಳನ್ನು ಮುಂಚಾಚಿ, ಹೀಚಿನಂತಹ ಎಳೆಬೆರಳು ಗಳನ್ನು ತೆರೆದು ಮುಚ್ಚಿ ತೆರೆದು ಮುಚ್ಚಿ ಸನ್ನೆ ಮಾಡಿ ಬಾರೆಂದು ಕರೆಯುವದು. ನಾನೇನೂ ಉತ್ತರ ಕೊಡದೆ ಮುಗ್ಧನಂತೆ ನಿಂತು ಬಿಟ್ಟರೆ, ಆ ಮಗುವು ಹೇಗೋ ತನ್ನ ಹೊಟ್ಟೆಯೊಳಗಿನ ನಗೆಯನ್ನು ಕೆದಕಿ ತೆಗೆದು ಕೇಕೆ ಹಾಕಿ ಕುಣಿಯುವದು. ನಾನು ಏನಾದರೂ ಸನ್ನೆ ಮಾಡಿದರಂತೂ ಸರಿ, ಅದು ಹೊಟ್ಟೆ ಹುಣ್ಣಾಗುವಂತೆ ಬಿದ್ದು ಬಿದ್ದು ನಕ್ಕು ತೇಕಹತ್ತುವದು. ಹಾಗಾದಾಗೆಲ್ಲ ಅದರ ಕಣ್ಣಾಲ್ಲಿ ಹುಟ್ಟಿ ಬಂದ ನೀರ ಹನಿಗಳು ಕ್ಷಣದಲ್ಲಿ ನನ್ನ ಕಣ್ಣಾಲ್ಲಿಯೂ ಒಡ ಮೂಡಿಕೊಳ್ಳುವವು.

ಹೀಗೆ ನಾನು ಆ ಮಗುವನ್ನು ನೋಡುತ್ತ ನಿಂತೆನೆಂದರೆ ನಿಂತೇ ಬಿಡುತ್ತಿದ್ದೆ. ಎಷ್ಟು ಹೊತ್ತು ಹಾಗೇ ನೋಡಿದ ಮೇಲೆ ಏನೋ ಒಂದು ಭಯವು ಮೈದೋರಿದಂತಾಗಿ, ನನಗೆ ನನ್ನ ಮೇಲೆ ಯೆ ಸಿಟ್ಟು ಬರುತ್ತಿತ್ತು. 'ನನ್ನವು ಕೆಟ್ಟ ಕಣ್ಣುಗಳು–ಮಕ್ಕಳನ್ನು ಕಾಣದವು. ಪಾಪ! ಆ ಮಗುವಿಗೆ ನನ್ನ ಕಣ್ಣು ಹತ್ತಿದರೆ ಹೇಗೆ' ಎಂದು ಹೆದರಿ ಗುಡ್ಡೆಗಳನ್ನೇ ಕಿತ್ತಿಕೊಂಡು ಬಿಡಬೇಕೆನ್ನುವಂತೆ ಸಿಟ್ಟಿನಿಂದ ಕಣ್ಣುಗಳನು ಚಿವುಟಿಕೊಳ್ಳುತ್ತಿದ್ದೆ. ಪಾಪ! ಆ ಕಣ್ಣು ಗಳಾದರೂ ಏನು ಮಾಡುವವು! ನಾನಾಗಿಯೇ ಅವಕ್ಕೆ ನೋವು ಕೊಟ್ಟುದರಿಂದ ಮತ್ತಿಷ್ಟು ನೀರು ತುಳುಕಿಸುತ್ತಿದ್ದವು. ಆ ಮೇಲೆ 'ಅಯ್ಯೋ– ನಾನು ನನ್ನ ಹೃದಯದ ಗೋಳನ್ನು ತಾಳಲಾರೆನಾದರೆ, ಪಾಪ ಈ ಕಣ್ಣುಗಳನ್ನೇಕೆ ನೋಯಿಸಿದೆ' ಎಂದು ನನ್ನ ಕಣ್ಣುಗಳ

ಮೇಲೆಯೆ ನನಗೆ ಕನಿಕರ ಬರುತ್ತಿತ್ತು.—ಹೀಗೆ ನಾನು ಎಷ್ಟೋ ದಿನ ನೋಡುತ್ತಿದ್ದ ಮೇಲೆ ನನಗೊಮ್ಮೆ ಬಲವಾಗಿ ಭಯವುಂಟಾಗಿ ಬಿಟ್ಟಿತು. ನಾನಂಥ ಹಳೇ ತರಹದವಳಾಗದಿದ್ದರೂ, ನನ್ನ ಕೆಟ್ಟ ಕಣ್ಣು ಹತ್ತದಿರಲೆಂದು, ನಾನೇ ನನ್ನ ಮನೆಯಲ್ಲಿ ಆ ಮಗುವಿನ ಹೊಸರಿನಿಂದ ದೃಷ್ಟಿ ಇಳಿದು ಬಿಟ್ಟೆನು.

ಒಂದು ದಿನ ಆ ಮಗುವು, ತನ್ನ ಬಾಗಿಲ ಬಳಿಯಲ್ಲಿ ಆಡುತ್ತ ನಿಂತಿದ್ದಿತು. ಬಳಿಯಲ್ಲಿ ಯಾರೂ ಇರಲಿಲ್ಲ. ಚಿಕ್ಕ ಮಗು. ಉಚ್ಚೆ ಹೊಯ್ದುಕೊಂಡು ನೆಲಕ್ಕೆ ತಿಕ್ಕಿತಿಕ್ಕಿ ಮೋರೆಗೆ ಒಡಿದುಕೊಳ್ಳುತ್ತ ನೋಡುವವರಿಗೆ ಅಸಹ್ಯವಾಗುವಂತೆ ಇದ್ದುಬಿಟ್ಟಿತ್ತು. ನಾನದನ್ನು ನೋಡಿದೆ. ಅದರ ಸ್ವಾತಂತ್ರ್ಯವಿಲಾಸವನ್ನು ನಾನು ಎಂದಿನಂತೆ ನೋಡುತ್ತ ಎಷ್ಟೋ ಹೊತ್ತು ನಿಂತುಕೊಂಡೆ. ಆಗ ಆ ಖೋಡಿ ತಾಯಿ ಮಾತ್ರ ಬರದಿರಲಿ ಎನ್ನಿಸಿತು. ನನ್ನ ಸೌಂದರ್ಯ ಕಲ್ಪನೆಯು ಬಹಳ ಹೇಸಿಯಾಗಿರಬೇಕು;— ನನಗೆ ಆ ಮಗುವು ಅಂದು ಎಂದಿಗಿಂತಲೂ ಅಂದವಾಗಿ ತೋರಿತು. 'ಯಾರೂ ಇಲ್ಲ. ಒಮ್ಮೆ ಓಡಿ ಹೋಗಿ ಅದನ್ನು ಹಿಡಿದು ಮುದ್ದಾಡಿ ಬರಲೇ' ಎನ್ನಿಸಿತು. ಎನಿಸುವುದೊಂದೇ ತಡ. ನನ್ನ ಭಾವನೆ ಆ ಕೆಲಸವನ್ನು ಮುಗಿಸಿಯೂ ಬಿಟ್ಟಿತು. ನಾನು ಮಾತ್ರ ನಿಂತಲ್ಲಿಯೇ ನಿಂತಿದ್ದೆ. ಆ ಭಾವನೆಯ ಆವೇಗದಲ್ಲಿ ನನ್ನ ಕೈಲಿದ್ದ ಕಸಪೊರಕೆಯನ್ನು ಬಲವಾಗಿ ಅವಚಿ ಮುದ್ದಿಟ್ಟೆ. ಅದರ ಕಡ್ಡಿಗಳು ತುಟಿಗಳಿಗೆ ಚುಚ್ಚಿ ನೋವಾಗಲು, ನಾನು ಎಚ್ಚತ್ತೆ. ಏನೋ ಒಂದು ಬಗೆಯ ಕಕ್ಕಾಬಿಕ್ಕಿಯಾಗಲು ಕಣ್ತೆರೆದು ಮಗುವನ್ನು ನೋಡಿದೆ. ಯಾವಾಗಲೋ ಆ ತಾಯಿ ಆ ಮಗುವನ್ನು ಎತ್ತಿಕೊಂಡು ಹೋಗಿಬಿಟ್ಟಿದ್ದಳು. ಏಕೆಂದರೆ, ಅವಳು ಅದರ ತಾಯಿ.

ಕೆಟ್ಟ ಜೀವ– ಆ ಮಗುವನ್ನು ಕದ್ದುಕೊಂಡು ಎಲ್ಲಿಯಾದರೂ ಓಡಿ ಹೋಗಿ ಬಿಡಲೇ ಎಂದು ಒಮ್ಮೊಮ್ಮೆ ಎನ್ನಿಸುವುದು. ಹಾಗೆ ಮಾಡಿದರೆ, ಆ ತಾಯಿಗೆ ಸ್ವಲ್ಪ ದುಃಖವಾಗುತ್ತಿದ್ದಿತೇನೋ ನಿಜ. ಆದರೇನು, ಅವಳು ಮತ್ತೊಂದನ್ನು ಹಡೆದುಕೊಳ್ಳಬಹುದಿತ್ತು. ಆದರೆ, ಜಗತ್ತಿನ ಮೂಲೆಮೂಲೆಗಳಲ್ಲೂ ತುಂಬಿಕೊಂಡ ತಾಯ್ತನ ದಿಂದ ಆ ಮಗುವನ್ನು ಮರೆಮಾಡಿ ಇರಿಸುವದು ಹೇಗೆ?

ಒಮ್ಮೆ ನಮ್ಮ ಶಾಲೆಯಲ್ಲಿ ಒಂದು ಉತ್ಸವವಾಯಿತು. ಶಾಲೆಯ ಮಕ್ಕಳಿಗೆಲ್ಲ ಮಿಠಾಯಿ ಹಂಚುವ ಕೆಲಸ ನನ್ನ ಕಡೆಗೆ ಬಂದಿತ್ತು. ಅಂದು ನಾನು ಮಿಠಾಯಿ ಹಂಚುತ್ತ ಶಾಲೆಯ ಬಾಗಿ ಲಲ್ಲಿ ನಿಂತಾಗ ತಮ್ಮ ಚಿಕ್ಕ ಚಿಕ್ಕ ಕೈಗಳನ್ನು ಚಾಚಿ ಮಿಠಾಯಿ ಇಸುಕೊಳ್ಳುತ್ತಿರುವ ಆ ಸಣ್ಣ ಮಗುಗಳ ಕಣ್ಣುಗಳಲ್ಲೆಲ್ಲ ನನ್ನ ಪ್ರೀತಿಯು ಆ ಮಗುವನ್ನೇ ಕಾಣಲು ಹಂಬಲಿಸಿ ಹುಡುಕಿ, ಇಲ್ಲ ದಾಗಲು, ನಾನು ಅದೇತಕ್ಕೋ– ಆ ಮಗುವಿಗಾಗಿ ಇರಲೆಂದು ಒಂದೆರಡು ಮಿಠಾಯಿಗಳನ್ನು ಕದ್ದುಕೊಂಡು ಬಂದೆ. ಅವುಗಳನ್ನೇ ಅವರ ಒಕ್ಕಲಗಿತ್ತಿಯನ್ನು ಕರೆದು, ಏನೇನೋ ಹೇಳಿಕೊಂಡು, ಆ ಮಗುವಿಗೆ ಮುಟ್ಟಿಸುವದಕ್ಕಾಗಿ ಕಳಿಸಿಕೊಟ್ಟೆ. ನಾನವನ್ನು ಕೊಟ್ಟಿರುವದಾಗಿ ಹೇಳಬಾರದೆಂದೂ ಅವಳನ್ನು ಕೇಳಿಕೊಂಡಿದ್ದೆ. ಆ ಒಕ್ಕಲಗಿತ್ತಿ ಹಾಗೆಯೆ ಮಾಡಿದಳು. ಆದರೆ, ಆ ಮಾತಾಯಿ ಒಕ್ಕಲ ಗಿತ್ತಿ ಕಣ್ಮರೆಯಾದೊಡನೆ, ಅದನ್ನು ಆ ಮಗುವಿನ ಕೈಯಿಂದ ಕಸಿದು ಬಿಟ್ಟಳು. ಮಗು ಅಳಹತ್ತಿತು. ನೋಡುತ್ತಿದ್ದ ಕಣ್ಣೇಕೆ ಒಡೆಯದೋ ಎನಿಸಿತು. ಅಂದು ರಾತ್ರಿ, ಯಾರಿಗೂ ಕಾಣದಂತೆ, ಕೆಳಗೆ ಬಿದ್ದ ತುಣುಕನ್ನು ಆರಿಸಿಕೊಂಡು ಬಂದೆ. ಏನೊ ನಾನು ಕಳಿಸಿದ ತಿನಸು

ಆ ಮಗುವಿನ ಹೊಟ್ಟೆಗೆ ಹತ್ತಬಾರದಾಗಿತ್ತು. ಏಕೆಂದರೆ ನಾನು ಅದರ ತಾಯಿಯಲ್ಲ. ನಾನು ಕಳವಿನಿಂದ, ಆ ಮಗುವಿಗೆ ವಿಂತಾಯಿ ಕಳಿಸಿಕೊಟ್ಟೆನೆಂದು ಆ ತಾಯಿತಂದೆಗಳಿಗೆ ಗೊತ್ತಾದರೆ ಅವರು ನನ್ನ ಬಗೆಗೆ ಏನೆಂದು ತಿಳಿದುಕೊಂಡಾರು ಎಂಬುದೂ ನನಗೆ ನೊದಲು ಹೊಳೆದಿರಲಿಲ್ಲ.

ಮುಂದೆರಡು ತಿಂಗಳಲ್ಲೇ ಆ ಮಗುವು ವಿಷಮಜ್ವರಕ್ಕೀಡಾಯಿತು. ಅದೇ ಹೊತ್ತಿಗೆ ಆ ತಾಯಿ ಮತ್ತೊಂದು ಮಗುವನ್ನು ಹೆತ್ತಳು. ಆಗ ಆ ಮಗುವನ್ನು ಯಾರು ನೋಡಿಕೊಳ್ಳುತ್ತಿದ್ದರೇನೋ! ನನ್ನ ಆತ್ಮಜೀವ ಮಾತ್ರ ಎಲ್ಲಿದ್ದರೂ ಅದನ್ನೇ ನೋಡಿಕೊಳ್ಳುತ್ತಿದ್ದಿತಾದರೂ ನಾನದರ ತಾಯಲ್ಲವಲ್ಲ!! ಏನು ಮಾಡಬಲ್ಲೆ !!!

ಆ ಮಗುವು, ತಾಯಿ ಹೊಲೆಮನೆಯಲ್ಲಿರುವಾಗಲೇ ತೀರಿಹೋಯಿತು. ಏನು ಮಾಡಬೇಕು. ಅದೊಂದು ಕತೆಕಾದಂಬರಿಯ ಮಗುವಾಗಿರಲಿಲ್ಲ. ನಿಜವಾದ ಮಗು. ಹಾಗಿಲ್ಲದೆ, ಅದೊಂದು ಕತೆಯ ಮಗುವಾಗಿದ್ದರೆ, ನಾನು ಕತೆಗಾರಳಾಗಿದ್ದರೆ, ಓದುಗರ ಪ್ರೀತಿಗಾಗಿಯಾದರೂ ಅದನ್ನು ಬದುಕಿಸಬಹುದಾಗಿತ್ತು. ಆದರೇನು! ಬಾಳುವೆಯು ಒಂದು ಕತೆಯಲ್ಲ. ಕಾದಂಬರಿಯಲ್ಲ. ಅದೊಂದು ಬಾಳಿನ ಕೂಸು. ಅದಕ್ಕೆ ನನ್ನ ಕೆಟ್ಟ ಕಣ್ಣು ಹತ್ತಿಯೇ ಬಿಟ್ಟಿತೇನೋ— ಹೋದದ್ದು ಹೋಗಿಯೇ ಬಿಟ್ಟಿತು.

ಆ ಮೇಲೆ ಹೆಚ್ಚು ಹೊತ್ತು ಆ ಮಗುವನ್ನು ಇಡಲಿಲ್ಲ ಕೂಡ. ಕೂಡಿದವರು ಎತ್ತಿಕೊಂಡು ಹೋಗಿ ಎಲ್ಲಿಯೋ ಒಂದು ಭೂಗರ್ಭದಲ್ಲಿ ಹುಗಿದಿಟ್ಟು ಬಂದರು. ನನ್ನೊಡಲಾದರೂ ಆ ಭೂಗರ್ಭವಾಗಿದ್ದರೆ

ತಾಯಿಯಿಂದ ತಪ್ಪಿಸಿಕೊಂಡ ಮೇಲಾದರೂ ಆ ಮಗುವು ನನ್ನ
ಬಳಿಗೆ ಬರಬಹುದಾಗಿತ್ತಲ್ಲ !

ಅಂದಿನ ರಾತ್ರಿ ನನ್ನ ಮನೆಯೆಲ್ಲ ಭಣಭಣವಾಗಿ ರಣಗುಟ್ಟು
ತ್ತಿದ್ದಿತು. ಮುನಸೂಫರ ಮನೆಯಲ್ಲಿ ಹೊಸಮಗುವೊಂದು ಹುಟ್ಟಿ
ದುದರಿಂದ ಜಮಾಖರ್ಚಿನ ಲೆಕ್ಕ ಸರಿಯಾಗಿಯೆ ಇತ್ತು. ನನ್ನಲ್ಲಿ
ಜಮೆಯಂತೂ ಇಲ್ಲವೆ ಇಲ್ಲ; ಖರ್ಚು ಮಾತ್ರ ಎರಡರಷ್ಟು. ಈ
ಕಲ್ಪನೆಯ ಭೀಕರತೆಯಿಂದಲೆ ನಾನು ಹೌಹಾರಿ ಹೋಗಿದ್ದೆನು.
ಊಟವಿಲ್ಲ; ಉಡಿಗೆಯಿಲ್ಲ. ದೀಪವಿಲ್ಲ; ಧೂಪವಿಲ್ಲ.

ಎಂದಿನಂತೆ ಇಂಥ ವಿಚಾರದಲ್ಲಿಯೇ ಮುಳುಗಿ ಕುಳಿತಿರುವಾಗ,
ಒಂದು ದಿನ ಆ ಕೂಸು ನನ್ನ ಬಾಗಿಲ ಬಳಿ ಬಂದು ನಿಂತು ಹಣಿಕಿ
ಹಾಕಿತು. ಒಮ್ಮೆ ಕಿಲಕ್ಕನೆ ನಕ್ಕಿತು. ಬೆರಳುಗಳಲ್ಲಿ ಜೀವ ಚಲಿ
ಸಲು ಕೈಮಾಡಿ ಕರೆಯಿತು. ನಾನು ನನ್ನ ಕೈಚಾಚಿ 'ಬಾರಮ್ಮ
ಗೌರಿ' ಎಂದೆ; ಮಗು ಲುಟಲುಟನೆ ಓಡುತ್ತ ಬಂದು ನನ್ನ ಮೈ
ಮೇಲೆ ಬಿದ್ದು ಉರುಳಾಡಹತ್ತಿತು. ನಾನದನ್ನು ಎತ್ತಿ ಮುದ್ದಾ
ಡಿದೆ. ಎದೆಗವಚಿ ಅಪ್ಪಿಕೊಂಡೆ. ಆಶೆಬುರಕ ಜಗತ್ತಿನಿಂದ ಮರೆ
ಮಾಡಲು ಅದನ್ನು ನನ್ನ ಸೆರಗಿನಲ್ಲಿ ಅಡಗಿಸಿದೆ. ಹೀಗೆ ಅದೆಷ್ಟೆಷ್ಟೋ
ಹೊತ್ತು ಆ ಮಗುವನ್ನು ಮುಟ್ಟಿ ತಟ್ಟಿ ಮುಂಡಾಡುತ್ತ ಮೈಮರೆದು
ಕುಳಿತಾಗ ನನ್ನ ಜೀವನವು ಅನಂತಕಾಲಾತೀತವಾಗಿ ಅಸೀಮವಾಗಿ
ರುವಂತೆ ಎನಿಸಿತು.

ಕೊನೆಗೊಮ್ಮೆ, ನಾನಾ ಮಗುವಿನ ಮುದ್ದುಮೊಗವನ್ನು
ಕಳುಪನಿಂದ ಮೆಲ್ಲನೆ ಇಣಿಕಿನೋಡಿದೆ. ಅದರ ಕಳೆಬೆಳಗುವ ಕಣ್ಣು
ಗಳು ನನ್ನನ್ನೇ ಎವೆಯಿಕ್ಕದೆ ನೋಡುತ್ತಿದ್ದವು. ನಾನು ಹಾಗೆ

ನೋಡುತ್ತಿದ್ದಾಗ, ಆ ಮಗುವಿನ ಕಣ್ಣ ಕನ್ನಡಿಯಲ್ಲಿ ನನ್ನ ರೂಪು ಮೂಡಿದುದು ಕಾಣುತ್ತಲೆ, ಆ ಮಗುವು ಒಬ್ಬ ಅಪರ್ಯಾಪ್ತ ಶಕ್ತಿ ತೇಜೋಯುತಳಾದ ವಿಶ್ವಮಾತೆಯಂತೆಯೂ, ನಾನು ಆ ಶಕ್ತಿಯ ಮುಂಗೈಮೇಲೆ ಮಡಗಿದ ಒಂದು ಮರಿಗೂಸಿನಂತೆಯೂ ತೋರಿತು,

ನಾನು ಮಗುವನ್ನು ಕೇಳಿದೆ: "ಅವೊತ್ತು ನೀನು ಅದೆಲ್ಲಿಯೋ ಹೋದೆಯಂದರಲ್ಲಮ್ಮಾ! ಎಲ್ಲಿ ಹೋಗಿದ್ದೆ ಮಗೂ? ಮತ್ತೆ ಹೇಗೆ ಬಂದೆ? ನನ್ನಲ್ಲಿ ಏಕೆ ಬಂದೆ? . . . . "

ಉಕ್ಕಿ ಉಗುವ ನನ್ನ ಕಣ್ಣೀರನ್ನೊರಿಸುತ್ತ, ಚಿಕ್ಕುದನಿಯಲ್ಲಿಯೆ ಮಗುವೆಂದಿತು: "ನೀನು ಕರೆದೆಯಲ್ಲ, ತಾಯೀ! ಅದಕ್ಕೆ ಬಂದೆ. ನನ್ನ ಆ ತಾಯಿಗಿಂತ ನೀನು ಬಹಳ ಚೆನ್ನಾಗಿರುವೆ; ನಾನಿನ್ನು ಎಂದೆಂದಿಗೂ ನಿನ್ನ ಬಳಿಯಲ್ಲೇ ಇರುವೆನಮ್ಮಾ! ಇನ್ನೆಂದೂ ಹಿಂದಿರುಗಿ ಹೋಗುವದಿಲ್ಲ."

ಹೀಗೆನ್ನುತ್ತಿರುವಾಗಲೆ ಮಗುವು ಒಂದು ಬಗೆಯ ನಗೆಯನ್ನು ನಕ್ಕು ತನ್ನ ತಲೆಯನ್ನು ನನ್ನೆದೆಗೆ ಆನಿಸಿ ಮಲಗಿತು.

"ಆಯಿತು, ಮಗೂ; ನನಗಾಗಿ ನೀನು ನಿನ್ನ ತಾಯನ್ನು ಸಹ ಬಿಟ್ಟು ಬಂದೆಯಲ್ಲ! ಹಾಗಾದರೆ ಇನ್ನು ಮೇಲೆ ನೀನು ಇಲ್ಲಿಯೆ ಇದ್ದುಬಿಡು ನನ್ನ ಬಂಗಾರಾ!"

ಮಾತನಾಡುತ್ತಿರುವಂತೆಯೆ, ನಂನ ತಾಯ್ಗರುಳ ಒಳ್ಳಿಗೆ ಹೂವೊಡೆದವು. ಆ ಉತ್ಸವದ ಉತ್ಸಾಹದಲ್ಲಿ ವ್ಯಮರಿತ ನಾನು ಆ ಮಗುವನ್ನು ಬಲವಾಗಿ ನನ್ನೆದೆಗೆ ಒತ್ತಿಕೊಂಡೆ. ಆ ಒತ್ತಿನ ನೋವಿನಿಂದ ನಾನು ಎಚ್ಚರಗೊಂಡು ನೋಡಿದಾಗ ಆ ಮಗುವಿರಲಿಲ್ಲ.

ಅದರ ಕೊನೆಯ ನಗೆಯು ಮಾತ್ರ ನನ್ನ ಕಣ್ಣೆದುರಿಗೆ ರೂಪಗೊಂಡು ಗಾಳಿಯ ತೆರೆಗಳ ಮೇಲೆ ತೇಲಾಡುತ್ತಿದ್ದಿತು.

ಅಂದು ಹಿಂದಿರುಗಿ ಬಂದದ್ದು ಆ ಮಗುವಲ್ಲ;— ಅದರ ನೆರಳು –ನೆನಪು! ಆ ಮಗುವು ತನ್ನ ತಾಯನ್ನು ಅಗಲಿ, ನನ್ನೊಡಲನ್ನೂ ಸೇರದೆ ಭೂಗರ್ಭಗತವಾದುದೇ ನಿಜ. ಆದರೆ ಅದರ 'ನೆನಪು' ನನ್ನನ್ನು ಅಗಲಿರಲಾರದೆ ಮರಳಿ ನನ್ನ ಹೃದಯಮಂದಿರದ ಬಾಗಿಲಲ್ಲಿ ಹಣಿಕಿಹಾಕಿ, ನಕ್ಕು ಕೆಲೆದು ಯುಕ್ತಿಯಿಂದ ಒಳಸಾರಿತು. ನಾನು ಆ ನೆನಪನ್ನು ಮಾತ್ರ ಅಂದಿನಿಂದಲೂ ನನ್ನ ಹೃದಯಗರ್ಭದಲ್ಲಿಯೇ ಹುಗಿದಿಟ್ಟುಕೊಂಡಿದ್ದೇನೆ. ಅಂತೆಯೇ ನನ್ನೀ ಹೃದಯವು ಆ ಮಗುವಿನ ನೆನಪಿಗಾಗಿ ನೆಲೆಸಿದ ಒಂದು ಗೋರಿ!



# ನನ್ನ ಫ್ರೋನೋ

ಶ್ರೀನಿವಾಸನಿಗೂ ನನಗೂ ಇತ್ತೀಚಿನ ಗೆಳೆತನ. ಆದರೂ ನಮ್ಮಿಬ್ಬರ ಆದರ ವಿಶ್ವಾಸಗಳಲ್ಲಿ ಎಳ್ಳಷ್ಟೂ ಕೊರತೆಯಿಲ್ಲ. ನಾನು ಸಿರಿವಂತನೆಂದಾಗಲಿ ಆತನು ಬಡವನೆಂದಾಗಲಿ ಯಾವ ತರದ ಭೇದ ಭಾವವು ಇಲ್ಲದೆ ನಮ್ಮ ಗೆಳೆತನವು ಸಹಜವಾಗಿ ಬೆಳೆದು ಬಂದಿತ್ತು.

ಒಂದು ಪರಿಯಿಂದ ನೋಡಿದರೆ ನಮ್ಮಿಬ್ಬರ ಗೆಳೆತನವು ಕೂಡಿದ್ದೇ ಸೋಜಿಗದ ಮಾತೆನ್ನಬೇಕು. ಯಾಕೆಂದರೆ, ನನ್ನ ಮನಸ್ಸಿನ ರೀತಿಯೂ, ಆತನ ಮನಸ್ಸಿನ ರೀತಿಯೂ ತೀರಾ ಭಿನ್ನವಾದುವು. ನನ್ನದು ಚುಚ್ಚು-ಜೀನಾದ ಸ್ವಭಾವ. ಆತನದು ಮುಟ್ಟಲಮುರಕನಂತಹ ಮನಸು. ನಾನು ಹರಟೆಖೋರ; ಆತನು ಗುಮ್ಮನ ಗುಸಕ. ಹೀಗೆ ನಮ್ಮ ನಮ್ಮ ಮನಸ್ಸಿನ ರೀತಿಗಳು ಭಿನ್ನವಾದುವಾದರೂ ಅವು ಪರಸ್ಪರ ವಿರೋಧಿಗಳಾಗಿರಲಿಲ್ಲ. ನಮ್ಮ ನಮ್ಮ ಮನಸ್ಸಿನ ಬಗೆ ಹೀಗೆ ಹೀಗೆ ಎಂದು ಇಬ್ಬರೂ ಚೆನ್ನಾಗಿ ಅರಿತುಕೊಂಡಿದ್ದೆವು. ನನ್ನ ಹರಟೆಖೋರತನದ ಬಗ್ಗೆ ಶ್ರೀನಿಸಾಸನಲ್ಲೂ, ಆತನ ಗುಮ್ಮನಗುಸುಕತನದ ಬಗ್ಗೆ ನನ್ನಲ್ಲಿಯೂ ಯಾವ ಬಗೆಯ ತಿರಸ್ಕಾರವೂ ಇರಲಿಲ್ಲ.

ಈಚೆಗೆ, ನನಗೆ ಮನೆತನದ ಅನುಕೂಲತೆ ಇದ್ದುದರಿಂದ ನಾನು ಪದವೀಧರನೆನೆಸಿಕೊಂಡೆ. ಆದರೆ ಶ್ರೀನಿವಾಸನಿಗೆ ಇಂಟರ ಪರೀಕ್ಷೆಯಾದಮೇಲೆ ವಿದ್ಯಾಬಲವೇ ತಪ್ಪಿಹೋಯಿತು. ಆತ ಅಷ್ಟರಲ್ಲಿಯೇ ಸಂತೋಷ ಹಚ್ಚಿಕೊಂಡು ನಮ್ಮೂರ ಸಾಲೆಯೊಂದರಲ್ಲಿ ಶಿಕ್ಷಕ

ನಾಗಿದ್ದ. ಸುಮಾರು ಮೂವತ್ತು ಮೂವತ್ತೈದರಷ್ಟು ಸಂಬಳ ಬರುತ್ತಿತ್ತು. ಬಂದದ್ದರಲ್ಲಿಯೇ ತನ್ನ ಚಿಕ್ಕ ಸಂಸಾರ ಸಾಗಿಸಿ ಕೊಂಡು ಆತ ನೆಮ್ಮದಿಯಾಗಿರುತ್ತಿದ್ದ. ಶ್ರೀನಿವಾಸನ ಸಂಸಾರ ವೆಂದರೆ ಆತ, ಆತನ ಎಳೆಹರೆಯದ ಹೆಂಡತಿ ಇಬ್ಬರೆ.

ಶ್ರೀನಿವಾಸನಿಗೆ ಸಂಗೀತದ ಮೇಲೆ ಹಿರಿದಾದ ಆಸೆ. ಜಲಸಾ-ಸಂಗೀತ ಕಚೇರಿಗಳು ಎಲ್ಲಿಯೇ ಆದರೂ ಆತ ತಪ್ಪದೇ ಅಲ್ಲಿರುತ್ತಿದ್ದ. ಅದಕ್ಕಾಗಿ ಆತ ಎಷ್ಟೋ ಸಲ ತನ್ನವೆಷ್ಟೋ ಕೆಲಸಗಳನ್ನು ಕೆಡಿಸಿ ಕೊಂಡಿರುವದಲ್ಲದೆ, ನನಗೂ ಹಲವು ಪರಿಯಾಗಿ ತೊಂದರೆ ಕೊಟ್ಟಿ ದ್ದಾನೆ. ಸಂಗೀತ ಎಂದರೆ ಸಾಕು—ಆತನಿಗೆ ರೋಮರೋಮ ಗಳಲ್ಲೆಲ್ಲಾ ಜೀವಕಳೆ ಉಕ್ಕಿ ಬರುವದು. ಇಷ್ಟು ಆತನ ಹುಚ್ಚು. ಆತನ ಈ ಮಿತಿಮೀರಿದ ಹುಚ್ಚಿಗಾಗಿ ನನಗೆ ಎಷ್ಟೋ ಸಲ ತಲೆ ತುಂಬಾ ಕೋಪಬಂದು ಬಿಡುವದು—'ಏನು ಈತನೊಬ್ಬನೆ ರಸಿಕನೇ ಜಗತ್ತಿನಲ್ಲೆಲ್ಲಾ' ಎಂದು.

ಆದರೆ ಪಾಪ ಶ್ರೀನಿವಾಸನಿಗೆ, ಸಂಗೀತದಲ್ಲಿ ಅಷ್ಟು ಹುಚ್ಚಿ ದ್ದರೂ ಹಾಡಲಿಕ್ಕೆ ಬರದು. ಕಂಠವೇ ಇಲ್ಲ. ಆದುದರಿಂದ ಸಂಗೀತ ಲೋಕದಲ್ಲಿ ಆತ ಒಂದು ಮೂಕ ಮಗುವಿನಂತೆ ಇದ್ದು ಬಿಟ್ಟಿದ್ದ. ಆದರೂ ಒಮ್ಮೊಮ್ಮೆ ತಾನೊಬ್ಬನೇ ಇದ್ದು ತನ್ನಷ್ಟಕ್ಕೆ ತಾನೇ ಹಾಡಿಕೊಳ್ಳುವ. ಹಾಡಿನಲ್ಲಿ ಮೈಮರೆತಿದ್ದರೆ ಆತನಿಗೆ ತನ್ನ ಕಂಠದ ಕುಂದು ಕಂಡುಬರುತ್ತಲೇ ಇರಲಿಲ್ಲ. ಹಾಗಿಲ್ಲದಾಗ ಮಾತ್ರ, ತಾನು ಹಾಡಲು ಉಸಿರೆತ್ತುವದು ಸಂಗೀತದೇವತೆಗೆ ಅಪ ಮಾನ ಮಾಡಿದಂತೆ ಎಂದೆನಿಸಿ ಆತ ಪರಿಬಂದ ದನಿಯನ್ನು ಹಿಂದ ಕ್ಕೊತ್ತಿ ಬಿಡುವ.

ಕುರುಡರಿಗೆ ಸ್ಪರ್ಶಶಕ್ತಿ ಹೆಚ್ಚೆಂತೆ; ಮೂಕರಿಗೆ ದೃಷ್ಟಿ ಬಲವಾಗಿರುವದಂತೆ. ಹಾಗೆಯೆ, ಕಂಠದಲ್ಲಿಲ್ಲದ ಭಾಗ್ಯ ಶ್ರೀನಿವಾಸನ ಕಿವಿಗಳಲ್ಲಿತ್ತು. ಯಾರು ಬಲ್ಲರು ! ಆತನು ಹಾಡುಗಾರನಾಗಿರದ್ದರಿಂದಲೆ ಸಂಗೀತದಲ್ಲಿ ಆತನಿಗೆ ಅಷ್ಟೊಂದು ಹುಚ್ಚು–ಮೆಚ್ಚು ಉಂಟಾಗಿದ್ದಿತೋ ಏನೋ !

ಆ ತನ್ನ ಹುಚ್ಚಿಗಾಗಿಯೆ ಶ್ರೀನಿವಾಸನು, ಪ್ರತಿದಿನವೂ ತಪ್ಪದೆ ನಮ್ಮಲ್ಲಿಗೆ ಬಂದು ನನ್ನ ಫೋನೋ ಹಚ್ಚಿಕೊಂಡು ಕುಳ್ಳಿರುತಿದ್ದ. ಆತನಿಗೆ ಬಿಡುವು ದೊರೆಯುವದೇ ತಪ್ಪು–ಎಲ್ಲಿದ್ದರೂ ಒಂದು ಸನ್ನ ಫೋನೋಕ್ಕೆ ಗಂಟುಬೀಳುವ. ಪಕ್ಕನೆ ಹೇಗೋ ಒಂದೆರಡು ದಿನ ಫೋನೋ ತಪ್ಪಿದರೆ ತೀರಿತು ; ಆತನಿಗೆ ಜೀವವೇ ಆಡದು. ಅಷ್ಟು ಪ್ರೇಮ ಆತನಿಗೆ ನನ್ನ ಫೋನೋದ ಮೇಲೆ. ನಾನು ಫೋನೋ ಕೊಂಡಂದಿನಿಂದೀಚೆಗೆ ನನ್ನಲ್ಲಿದ್ದ ಆತನ ಪ್ರೀತಿಯು ಕಡಿಮೆಯಾಗಿ ಬಿಡಬಹುದೇನೋ ಎಂದು ನನಗೇ ಒಂದೆರಡು ಸಲ ಸಂದೇಹ. ಏಕೆಂದರೆ ಫೋನೋಕ್ಕೆ ಮರುಳಾದ ಆತ, ಬರೇ ನನ್ನನ್ನೇಕೆ, ಇಡೀ ಪ್ರಪಂಚವನ್ನೇ ಮರೆತು ಬಿಡುತಿದ್ದ. ಆದರಿಂದ ಆ ಹಾಳು ಫೋನೋ ಕೊಂಡದ್ದೇ ನನ್ನ ತಪ್ಪೆಂದು ನಾನೆಷ್ಟೋ ಸಲ ಎಂದುಕೊಂಡಿದ್ದೇನೆ.

ನಾವು ಯಾರಾದರೂ ಫೋನೋ ನಡೆಸುತ್ತಿದ್ದಾಗ, ಯಾವ ರೆಕಾರ್ಡುಗಳನ್ನು ಹಚ್ಚಿದರೂ ಶ್ರೀನಿವಾಸನು ಏಕಮನಸ್ಸಿನಿಂದ ಕೇಳುತ್ತಿದ್ದುದೇನೋ ನಿಜ. ಆದರೆ ತಾನೊಬ್ಬನೇ ಇದ್ದಾಗ ತನ್ನ ಅಚ್ಚುಮೆಚ್ಚಿನವಾದ ಐದು ರೆಕಾರ್ಡುಗಳನ್ನು ಮಾತ್ರ ಆತ ಯಾವಾಗಲೂ ಹಚ್ಚುವನು. ಅವುಗಳಲ್ಲಿ ಒಂದು ಕನ್ನಡ, ಒಂದು ತೆಲಗು, ಒಂದು ಹಿಂದೀ, ಎರಡು ಬಂಗಾಲಿ. ಈ ಐದು ರೆಕಾರ್ಡುಗಳನ್ನೇ

ಆತ ಎಷ್ಟೆಷ್ಟೋ ಹೊತ್ತಿನ ವರೆಗೆ ತಿರುಗಿ ಮುರುಗಿ ಹಚ್ಚಿ ಕೇಳುತ್ತ ಕುಳಿತುಕೊಂಡು ಬಿಡುವ. ಆತನಿಗೆ ಆ ಐದು ರೆಕಾರ್ಡುಗಳಲ್ಲಿ ಅಂಥ ಮಹತ್ವವೇನಿತ್ತೋ ಬಲ್ಲವರಾರು?

* * * *

ಶ್ರೀನಿವಾಸನಿಗೆ ತನ್ನ ಹೆಂಡತಿಯ ಮೇಲೆ ಬಲು ಅಕ್ಕರೆ. ತಾನು ಅನುಭವಿಸುವ ಎಲ್ಲ ಸುಖ–ಸಂತೋಷಗಳಲ್ಲೂ ಅವಳು ಪಾಲು ಗಾರ್ತಿಯಾಗಬೇಕೆಂದು ಆತನ ಹಂಬಲ. ಅದಕ್ಕಾಗಿ ತಾನು ದಿನಾಲು ಕೇಳಿ ನಲಿಯುತ್ತಿದ್ದ ಆ ಐದು ರೆಕಾರ್ಡುಗಳನ್ನಾದರೂ ಅವಳಿಗೆ ಕೇಳಿಸ ಬೇಕೆಂದು ಆತನ ಆತುರ. ತನ್ನ ಹೆಂಡತಿಯ ಎದುರಿಗೆ ಆ ಮಾತನ್ನು ಹೇಳಿದ್ದನಾದರೂ ನನ್ನೆದುರಿಗೆ ಅದನ್ನು ಬಾಯಿಬಿಚ್ಚಿ ಆಡಲೊಲ್ಲ. ಆತನ ಮನಸ್ಸೇ ಅಂತಹದು. ನನ್ನ ಫೋನೋವನ್ನೂ ಆ ಐದು ರೆಕಾರ್ಡುಗಳನ್ನೂ ಆ ಸಂಗೀತವನ್ನೂ ಶ್ರೀನಿವಾಸನು ಅದೆಷ್ಟೋ ಸಲ ತನ್ನ ಹೆಂಡತಿಯೆದುರಿಗೆ ಬಣ್ಣಿಸಿದ್ದನಂತೆ. ಹಾಗೆ ಬಣ್ಣಿಸು ವಾಗ, ತಾನು ಕೇಳಿದ ಸಂಗೀತವನ್ನು ನೆನೆನೆನೆದು ಕಣ್ಣೀರು ಹಾಕಿ ದ್ದನಂತೆ. ಆದರೂ, ತನ್ನ ಹೆಂಡತಿಯನ್ನು ನಮ್ಮ ಮನೆಗೆ ಕರೆದು ಕೊಂಡು ಬರುವದಕ್ಕಾಗಲಿ, ಇಲ್ಲವೆ ನನ್ನ ಫೋನೋವನ್ನೇ ತನ್ನ ಮನೆಗೆ ತೆಗೆದುಕೊಂಡು ಹೋಗುವದಕ್ಕಾಗಲಿ ಆತ ಎದೆ ಮಾಡಲಿಲ್ಲ. ಆಗಲೆ ನನಗೆ ಹಾಗೆ ಎಂದು ಗೊತ್ತಿದ್ದರೆ ಎಷ್ಟು ಚೆನ್ನಾಗಿತ್ತಲ್ಲಾ ಎಂದು ಈಗಲೂ ಮರುಗುತ್ತಿದ್ದೇನೆ.

ಮುಂದೆ ಕ್ರಿಸ್‌ಮಸ್‌ದಲ್ಲಿ ನಾನು ನನ್ನ ಕೆಲವು ಪದವೀಧರ ರಾದ ಮಿತ್ರರೊಂದಿಗೆ ಬೆಂಗಳೂರು–ಮೈಸೂರುಗಳ ಕಡೆಗೆ ಹೋಗ ಬೇಕಾಗಿ ಬಂತು. ನಾನು ಹೊರಡುವ ದಿನ ಶ್ರೀನಿವಾಸನು ಕೇಳಲೋ

ಬೇಡವೋ ಎಂದು ಹೆದರಿ ಹೆದರಿಕೊಳ್ಳುತ್ತ ನಾಲಗೆಯ ಮಾತು ತುಟಿಯನ್ನು ಕೂಡ ದಾಟಿತೋ ಇಲ್ಲವೆಂಬಂತೆ ಒಮ್ಮೆ ಒಮ್ಮೆ ನಾನು ಹಿಂದಿರುಗಿ ಬರುವವರೆಗೆ ಫೋನೋ ತನ್ನಲ್ಲಿರಲೆಂದು ಕೇಳಿಕೊಂಡ. ನಾನು ಬೇಡವೆಂದೇತಕ್ಕೆನ್ನಲಿ! ಆತ ಎಂದು ಯಾವಾಗ ಬಂದು ಬೇಡಿದ್ದರೂ ನಾನು ಕೊಟ್ಟು ಬಿಡಬಹುದಾಗಿತ್ತು. ಆದರೆ ಶ್ರೀನಿವಾಸನಿಗೆ ಒಮ್ಮೆ ಬಾಯಿಬಿಚ್ಚಿ ಕೇಳಬೇಕೆಂದರೆ ಪ್ರಾಣಸಂಕಟ. ಅದರ ಹಿಂದಿನ ದಿನವೂ ಆತ ಎರಡು ಸಲ ನನ್ನನ್ನು ಕೇಳಬೇಕೆಂದು ಬಂದಿದ್ದರೂ ಕೇಳಲಾರದೆ ಹಿಂದಿರುಗಿ ಹೋಗಿದ್ದನಂತೆ. ಅಂದು ಮಾತ್ರ ಯಾವ ಸರಸ್ವತಿ ವರವಿತ್ತಳೋ-ಬಾಯಿಬಿಚ್ಚಿ ಕೇಳಿ ಫೋನೋ ತೆಗೆದುಕೊಂಡು ಹೋದ, ಮಹಾರಾಯ!

*　　*　　*　　*

ನಾವು ನಮ್ಮ ಯಾತ್ರಾವಿಹಾರವನ್ನು ತೀರಿಸಿಕೊಂಡು ಮರಳಿದೆವು. ನನ್ನ ಔತಣವನ್ನು ಮನ್ನಿಸಿ ನನ್ನ ಮಿತ್ರರು ನಮ್ಮೂರಲ್ಲಿ ನಾಲ್ಕೈದು ದಿನ ಇರುವದಾಗಿ ಒಪ್ಪಿಕೊಂಡಿದ್ದರು. ಅವರು ಇರುವಾಗ ಅವರ ಮನಸ್ಸಿಗೆ ಒಗ್ಗುವಂತೆ ತಮಾಷೆ ನಡೆಯಬೇಕಾಗಿದ್ದಿತು. ಅದಕ್ಕಾಗಿ ನಾನು ಬಂದ ದಿನವೇ ರಾತ್ರಿ ಶ್ರೀನಿವಾಸನಿಂದ ಫೋನೋ ತರುವದಕ್ಕಾಗಿ ನಿಂಗನನ್ನು ಸಂಗಡ ಕರೆದುಕೊಂಡು ಹೋದೆ. ಆಗ ಹೊತ್ತು ಒಂಬತ್ತುವರೆ ಹತ್ತಾಗಿರಬಹುದು. ಊಟವನ್ನು ತೀರಿಸಿಕೊಂಡು ಗಂಡಹೆಂಡರಿಬ್ಬರೂ ಫೋನೋ ಕೇಳುವದರಲ್ಲಿ ತೊಡಗಿದ್ದರು. ಮಂಚಡ ಮೇಲೆ ಅಡ್ಡಲಾಗಿ ಮಲಗಿದ ಹೆಂಡತಿಗೆ ಒರಗಿಕೊಂಡು ಶ್ರೀನಿವಾಸ ತನ್ನ ಪ್ರೀತಿಯ ರೆಕಾರ್ಡೊಂದನ್ನು ಹಚ್ಚಿ ಅದರ ಸಂಗೀತದಲ್ಲಿ ಮುಳುಗಿಬಿಟ್ಟಿದ್ದ. ಆತನ ಮೈಯೆಂತಮೈಯೆಲ್ಲ

ಹರಿದಾಡುತ್ತಿದ್ದ ಆನಂದ ಲಹರಿಗಳನ್ನು ನಾನು ಕಿಡಿಕಿಯಲ್ಲಿ ನಿಂತು ಕೊಂಡೇ ನೋಡುತ್ತ ಮೋದಗೊಳ್ಳುತ್ತಲಿದ್ದೆ. ಮುಂದೆ ಒಂದೆರಡು ನಿಮಿಷಗಳಲ್ಲೇ ರೆಕಾರ್ಡು ಮುಗಿದು ಫೋನೋ ಹಾಡುವದನ್ನು ನಿಲ್ಲಿಸಿತು. ಒಡನೆ ಶ್ರೀನಿವಾಸನು ಬೆಚ್ಚಿಬಿದ್ದು ಚೇತರಿಸಿಕೊಂಡು ನೋಡಿದ—ಹಾಡು ನಿಂತು ಹೋಗಿತ್ತು. ಸಂಕಟಗೊಂಡವರಂತೆ ಮೋರೆ ಕಿವಿಚಿ ರೆಕಾರ್ಡನ್ನು ಕೈಯಲ್ಲಿ ತೆಗೆದುಕೊಂಡ. ಆಗ, ಯೋಗಭಂಗವಾಗಿ ಎಚ್ಚತ್ತು ಕಾಮನನ್ನು ಸುಡುವದಕ್ಕಾಗಿ ತನ್ನ ಮೂರನೇ ಕಣ್ಣನ್ನು ತೆರೆಯಲುಜ್ಜುಗಿಸಿದ ಪರಮೇಶ್ವರನ ಕೋಪ ದಂತಹ ಕೋಪವು ಶ್ರೀನಿವಾಸನಲ್ಲಿ ತುಂಬಿ ಬಂದಿರಬೇಕು. ಆ ರೆಕಾರ್ಡು ಅಷ್ಟು ಬೇಗನೇ ಏಕೆ ಮುಗಿದು ಹೋಯಿತೆಂದು ಆತನಿಗೆ ಸಿಟ್ಟು. ಆ ಸಿಟ್ಟಿನಲ್ಲಿ ಆತನು ಆ ರೆಕಾರ್ಡನ್ನು ನೆಲಕ್ಕೆ ತಳ್ಳಿಬಿಡು ವದರಲ್ಲಿದ್ದ. ಆದರೆ ಆತನ ಹೆಂಡತಿ ತಡೆದಳು. ಒಡನೆ ಶ್ರೀನಿವಾಸನು ಒಂದು ಮುಗುಳ್ನಗೆಯನ್ನು ಬೀರಿ, ಮತ್ತೊಂದು ರೆಕಾರ್ಡು ಹಚ್ಚಿದ. ನಾನೂ ಶ್ರೀನಿವಾಸನ ಆನಂದದಾಟವನ್ನು ನೋಡುವದರಲ್ಲಿ ಮೈ ಮರೆತಿದ್ದೆ. ಆದರೆ ಆಳು ಎಚ್ಚರಿಸಿದ್ದರಿಂದ ನಿರ್ವಾಹವಿಲ್ಲದೆ ಶ್ರೀನಿವಾಸ ನನ್ನು ಕೂಗಿದೆ. ಹೊಸ ಹಾಡಿನ ಸಂಗೀತದಲ್ಲಿ ತಲ್ಲೀನನಾಗುತ್ತ ಲಿದ್ದ ಆತನು ಮತ್ತೊಮ್ಮೆ ಬೆಚ್ಚಿಬಿದ್ದು, ಅತ್ತಿತ್ತ ನೋಡಿ, ಕೊನೆಗೆ ನನ್ನನ್ನು ಗುರುತಿಸಿ ಬಾಗಿಲು ತೆರೆದು ಈಚೆಗೆ ಬಂದ. ನಾನು ಮನ ಸ್ಸಿಲ್ಲದಿದ್ದರೂ—ಬಂದ ಕೆಲಸವನ್ನು—ಹೇಳಿದೆ. ಶ್ರೀನಿವಾಸನು ಸ್ವಲ್ಪ ಕಕ್ಕಾಪಿಕ್ಕಿಯಾದರೂ ಮರುಮಾತನಾಡದೆ, ಫೋನೋ ತಂದು ಕೊಟ್ಟುಬಿಟ್ಟ. ಉಪಚಾರಕ್ಕೇ ನಾನು ಕೇಳಿದೆ 'ಸೀನೂ—ನಿನಗೇನು ತೊಂದರೆಯಿಲ್ಲವಷ್ಟೇ ನಾನು ಫೋನೋ ಒಯ್ದರೆ?' ಆತನು ಮನಸು

ಮುದುಡಿಕೊಂಡೇ ಹೇಳಿದ– 'ಏನೂ ಇಲ್ಲ; ನೀನು ಬಂದದ್ದೇ ಒಳಿತಾಯಿತು.' ಆತನ ಮಾತೂ ಔಪಚಾರಿಕವೇ ಆಗಿತ್ತು.

*  *  *  *

ನಾನು ನನ್ನ ಪದವೀಧರರಾದ ಮಿತ್ರರನ್ನು ಮೋಜುಗೊಳಿಸು ವದಕ್ಕಾಗಿ ಆ ಫೋನೋ ತೆಗೆದುಕೊಂಡು ಹೋದಾಗ ನನ್ನ ಎಳೆಗೆಳೆಯ ನಾದ ಆ ಬಡಜೀವಿಯ ಮನಸ್ಸು ಎಷ್ಟು ತಳತಳ ಎಂದಿತೆಂಬುದು ನನಗಾಗ ಹೊಳೆಯಲೆ ಇಲ್ಲ.

ಅಂದಿನ ಇರುಳು ಶ್ರೀನಿವಾಸನಿಗೆ ನಿದ್ರೆಯೇ ಇಲ್ಲ. ಇರುಳೆಲ್ಲ ಹುಚ್ಚು ಹಿಡಿದವರಂತೆ ಗೋಡೆ ಗೋಡೆ ಹಾಯುವದಕ್ಕೆ ಆರಂಭಿಸಿರ ಬಹುದು. ಹಲವು ತರದ ಎಣಿಕೆಗಳು ಆತನನ್ನು ಸುತ್ತಿ ಮುತ್ತಿ ಹರಿದುಕೊಂಡು ತಿಂದಿರಬಹುದು. ಆ ಫೋನೋ ತನ್ನದಾಗಿರದ್ದಕ್ಕೂ, ತಾನು ಅಷ್ಟು ಬಡವನಾಗಿದ್ದುದಕ್ಕೂ, ಗೆಳೆಯನಾಗಿಯೂ ನಾನು ಆತನ ಒಗೆಯನ್ನು ತಿಳಿದುಕೊಳ್ಳದೆ ಹೋದುದಕ್ಕೂ ಶ್ರೀನಿವಾಸನಿಗೆ ಅತ್ಯಂತ ಸಂತಾಪವಾಗಿರಬೇಕು. ತನ್ನ ಪ್ರೀತಿಯದೊಂದು ವಸ್ತುವು ತನ್ನ ಒದಿಯಲ್ಲಿರಬೇಕೆಂದರೆ ಆಗದೇಕೆ ಎಂದು ಆತ ಹಲವು ಪರಿಯಾಗಿ ತಳಮಳಿಸಿರಬೇಕು. ಹಾಲು–ಸಕ್ಕರೆ ಗಂಟಲಲ್ಲಿಳಿಯುತ್ತಿರುವಾಗಲೆ ಕುತ್ತಿಗೆ ಹಿಚುಕಿದಂತೆ ಆತನಿಗೆ ಎನ್ನಿಸಿರಬಹುದು.

ಮುಂದೆ ಎರಡು ಮೂರು ದಿನಗಳ ವರೆಗೂ ಶ್ರೀನಿವಾಸ ಮಂಕುಮಂಕಾಗಿಯೇ ಇದ್ದ. ಶಾಲೆಗೆ ಕೂಡಾ ಹೋಗಿರಲಿಲ್ಲವಂತೆ. ನಾನಾಗಿಯೇ ಮಾತನಾಡಿಸಿದರೂ ಆತನು ಮರುಮಾತಗೊಡನು. ನಾನು ಫೋನೋ ಒಯ್ದುದ್ದರಿಂದಲೇ ಹಾಗಾಯಿತೆಂದು ನಾನೂ ಆಗ ಊಹಿಸಲಾರದೆ ಹೋದೆ.

ಶ್ರೀನಿವಾಸನಿಗೆ ಹಾಗೇಕೆ ಆಯಿತೆಂಬುದರ ಅಳವು ನನಗೂ ತಿಳಿಯದಾಯಿತು. ಒಂದು ಸೊಟ್ಟ ಕಟ್ಟಿಗೆಯ ಪೆಟ್ಟಿಗೆಗಾಗಿ ಇಷ್ಟು ಗೋಳಾಟವೆಂದರೇನು. ನಾನು ಇಂದು ಒಯ್ದಿದ್ದರೂ ನಾಳೆ ಬೇಡಿದ್ದರೆ ಮತ್ತೆ ಫೋನೋ ಶ್ರೀನಿವಾಸನದೇ. ಆದರೂ ಶ್ರೀನಿವಾಸನ ಮನಸ್ಸು ಅಂತಹದು. ಆ ಸಣ್ಣ ಮಾತನ್ನೇ ಆತ ಅಷ್ಟು ಹಚ್ಚಿಕೊಂಡ. ಆತನ ಮನಸ್ಸಿನ ಪರಿಯನ್ನು ತಿಳಿದಿದ್ದರೂ ನಾನು ಉಪಾಯಗಾಣದಾದೆ. ಹಿಂದಿನ ವರ್ಷ ನನ್ನ ಮಗುವು —ನನ್ನದೇ ನನ್ನದಾದ ಮಗುವೊಂದು ತೀರಿಹೋದಾಗ 'ಕೊಟ್ಟ ದೇವರು ಕೊಂಡು ಹೋದರೆ ಕುಟ್ಟಿಕೊಂಡು ಅಳುವದೇತಕೆ' ಎಂದು ತತ್ವಜ್ಞಾನ ಹೇಳಿ ನನ್ನನ್ನು ಸಮಾಧಾನ ಮಾಡಿದ ಶ್ರೀನಿವಾಸನು, ಒಬ್ಬರು ತಮ್ಮ ಎರವಿನ ಒಡವೆಯನ್ನು ತೆಗೆದುಕೊಂಡರೆ ಇಷ್ಟು ಕಳವಳಿಸಬಹುದೆಂದು ನಾನು ಬಗೆದಿರಲಿಲ್ಲ. ಆದರೇನು. ಅದು ಶ್ರೀನಿವಾಸನ ಮನಸ್ಸು. ಮೋಜಿಗಾಗಿ ಇಟ್ಟುಕೊಂಡಿದ್ದ ಫೋನೊ ನನಗೆ ಒಂದು ಕಟ್ಟಿಗೆಯ ಪೆಟ್ಟಿಗೆಯಾಗಿತ್ತು. ಆದರೆ ಸಂಗೀತ ಜೀವಿಯಾದ ಶ್ರೀನಿವಾಸನಿಗೆ ಅದು ಒಂದು ಚೈತನ್ಯಮೂರ್ತಿ ಯಾಗಿದ್ದಿರಬಹುದು. "ನನ್ನ ಪ್ರೀತಿಯ ಒಡವೆಯು ನನ್ನದಾಗಿಲ್ಲ ವಲ್ಲ" ಎಂಬುದೇ ಆತನ ಎದೆಗುದಿ. ಅದೊಂದೇ ಮಾತು ಆತನ ಕರುಳನ್ನು ಕಚ್ಚುತ್ತಿದ್ದಿರಬೇಕು. ನಿಜವಾಗಿ ಬಗೆದರೆ ಆತನಿಗೆ ನನ್ನ ಮೇಲೆ ಸಿಟ್ಟಿರಲಾರದು.

ಆದರೂ ಅಂದಿನಿಂದ ಶ್ರೀನಿವಾಸ ನನ್ನನ್ನು ಮಂದಿ ಎಂದು ತಿಳಿಯಹತ್ತಿದ. ಕಂಡರೆ ಹೆಚ್ಚಿಗೆ ಮಾತಿಲ್ಲ. ಒಂದು ದಿನವೂ ತಪ್ಪದೆ ಫೋನೋಕ್ಕೆ ತನ್ನ ಪ್ರೀತಿಯನ್ನು ಸಲ್ಲಿಸಿ ಹೋಗುತ್ತಿದ್ದಾತನು ಈಗ

ಒಮ್ಮೆಯೂ ನಮ್ಮ ಮನೆಯ ಕಡೆಗೆ ಹಾಯನು. ಪಾಪ ಆತನೆದೆ ಯಲ್ಲಿ ಅದೆಂತಹ ವಿರಹ ಯಾತನೆಗಳು ಚಿನ್ನಾಟವಾಡುತ್ತಲಿದ್ದವೊ! ಅದು ಒಂದು ಕಟ್ಟಿಗೆಯ ಪೆಟ್ಟಿಗೆಗಾಗಿ!! ಒಂದು ನಿರ್ಜೀವ ಯಂತ್ರ ಕ್ಕಾಗಿ!!! ನನಗಂತೂ ಅರಿದಾದ ಮಾತು. ಗೆಳೆಯನಾದ ನಾನೂ ಜೀವಸಖಿಯಾದ ಹೆಂಡತಿಯೂ ಬೇಸರವಾಗಿರಬೇಕೆಂದರೆ ಇದು ರಾಜ್ಯಕ್ಕೆ ಹೊರ್ತಾದ ಸಂಗತಿಯಲ್ಲವೇ ಮತ್ತೆ! ಆದರೂ ಶ್ರೀನಿವಾಸ ನಿಗೆ ಮಾತ್ರ ಹಾಗಾಗಿದ್ದಿತು.

ಹೀಗೆ ಒಂದು ಒಂದೂವರೆ ವರ್ಷ ಕಳೆಯಿತು. ಶ್ರೀನಿವಾಸ ನಿಗೂ ನನಗೂ ಬಳಕೆಯೇ ಇಲ್ಲ. ಆತ ಮೊದಲೇ ಗುಮ್ಮನಗುಸಕ. ಈಗಂತೂ ಮನಸ್ಸು ನೊಂದವ. ನಾನು ಆತನನ್ನು ಸಂತೈಸಲು ಮಾಡಿದ ಯತ್ನವೆಲ್ಲವೂ ವ್ಯರ್ಥವಾಯಿತು. ಆತನ ಮನದಲ್ಲೂ ಮನೆ ಯಲ್ಲೂ ತುಂಬಿದ ದುಗುಡವು ನನ್ನ ಮನದಲ್ಲೂ ಮನೆಮಾಡಿತು.

ಮುಂದೆ ಕೆಲವು ದಿನಗಳ ನಂತರ, ನಾನು ನಿರೀಕ್ಷಿಸುತ್ತಿರು ವಂತೆಯೇ ಶ್ರೀನಿವಾಸನು ಒಳ್ಳೆ ಚಟುವಟಿಕೆಯಲ್ಲಿದ್ದಂತೆ ತೋರಿತು. ಸಾಲೆಯ ಕೆಲಸದಲ್ಲಿ ಒಳ್ಳೆ ದಕ್ಷತೆ ತೋರಿಸುತ್ತಲಿದ್ದ. ದುಡ್ಡಿಗಾಗಿ ಎಂದೂ ಆಸೆಮಾಡದ ಶ್ರೀನಿವಾಸನು ಈಗಲೀಗ ನಾಲ್ಕೆಂಟು ಹುಡು ಗರಿಗೆ ಓದು ಹೇಳುವದಕ್ಕೆ ಆರಂಭಿಸಿದ್ದ. ವರ್ಷಗಟ್ಟಲೆ ಹೆಂಡತಿ ಯನ್ನು ತೌರುಮನೆಗೆ ಕಳಿಸಿಬಿಟ್ಟಿದ್ದ. ಅದನ್ನೆಲ್ಲ ನೋಡಿ ನನಗೆ ಅಚ್ಚರಿಯಾದರೂ, ದುಡ್ಡಿನ ಬೆನ್ನುಹತ್ತಿದ ಮೇಲೆ ಶ್ರೀನಿವಾಸ ತನ್ನ ಮೊದಲಿನ ಹುಚ್ಚನ್ನೆಲ್ಲ ಹಾರಹೊಡೆದಿರಬಹುದೆಂದು ಬಗೆದು ನಾನು ಸಮಾಧಾನ ಮಾಡಿಕೊಂಡೆ.

* * * *

# ನನ್ನ ಫೋಟೋ

ಒಂದು ದಿನ ಸಂಜೆಯ ಎಂಟುಗಂಟೆಯಾಗಿತ್ತು. ನಾನಿನ್ನು ಊಟಕ್ಕೆ ಏಳುವವ. ಅಷ್ಟರಲ್ಲಿ ನಮ್ಮ ಮನೆಯ ಬಾಗಿಲಲ್ಲಿ ಒಂದು ಟಾಂಗಾ ಬಂದು ನಿಂತಿತು. 'ಅಂತೂ ಊಟದ ಹೊತ್ತಿಗೆ ಯಾರೋ ಆಯುತ ಒದಗಿದರಲ್ಲಾ!' ಎಂದೆನ್ನುತ್ತ ನಾನು ಕಿಡಿಕಿಯಲ್ಲಿ ಹಣಿಕಿ ಹಾಕಿದೆ. ಬಂದವನು ಶ್ರೀನಿವಾಸ. ಕಿರುದನಿಯಲ್ಲೆ ಕೂಗಿ ನನ್ನನ್ನು ಹೊರಕ್ಕೆ ಕರೆದ. ಆತನ ಮೋರೆಯಲ್ಲಿ ದೀನ ಮುದ್ರೆಯಿತ್ತು. ಬಹು ದಿನಗಳ ಮೇಲೆ ಶ್ರೀನಿವಾಸನು ತಾನೇ ಬಂದುದರಿಂದ ನನಗೆ ಆನಂದವಾಗಿದ್ದರೂ ನಾನದನ್ನು ಮುಚ್ಚಿಟ್ಟುಕೊಂಡೆ. ಶ್ರೀನಿವಾಸನು ಕೆಳಗಿನ ಮೆಟ್ಟಲಿನ ಹತ್ತರವೇ ನಿಂತು, ನನ್ನ ತುದಿಬೆರಳನ್ನು ಹಿಡಿದುಕೊಂಡು 'ಕೆಳೆಯ, ನಾನೊಂದು ಮಾತನ್ನು ಕೇಳಬೇಕೆಂದಿರುವೆ! ಕೇಳಲೇ?' ಎಂದು ತಡವರಿಸುತ್ತ ಮಾತನಾಡಿದ. 'ಕೇಳು ಸೀನೂ, ಬೇಕಾದ್ದು ಕೇಳು; ನನ್ನಲ್ಲಿ ನೀನಾವುದಕ್ಕೂ ಸಂಕೋಚ ಮಾಡಿಕೊಳ್ಳಬೇಕಾದ್ದಿಲ್ಲ.' ಎಂದು ನಾನೆಂದೆ. ಶ್ರೀನಿವಾಸನು ನಮ್ಮ ಮನೆಯ ಕಟ್ಟೆಯ ಮೇಲೆ ಕುಳಿತುಕೊಂಡ. ನಾನೂ ಹೊಸ್ತಿಲ ಮೇಲೆ ಕುಳಿತುಕೊಂಡೆ. ಒಂದೆರಡು ಸಲ ಉಗುಳು ನುಂಗುವ ಗಳಕ್ಕೆಂಬ ಬಲವಾದ ಸಪ್ಪಳವು ಶ್ರೀನಿವಾಸನ ಗಂಟಲಿಂದ ಕೇಳಬಂತು. ತುಸು ತಡೆದು ಮತ್ತೆ ಹೇಳಿದ. 'ಕಿಟ್ಟೂ, ನೀನು ನಿನ್ನ ಫೋಟೋ ಕೊಡಬೇಕು.'—'ಅದಕ್ಕೇನು ಸೀನೂ, ಬೇಕಾದಾಗ ಒಯ್ಯಬಹುದಲ್ಲ.'—'ಹಾಗಲ್ಲ ಕಿಟ್ಟೂ, ನೀನು ಅದನ್ನು ನನಗೇ ಕೊಟ್ಟುಬಿಡಬೇಕು.'— ಈ ಮಾತು ಕೇಳಿ ನನಗೆ ಸ್ವಲ್ಪ ಹಿಡಿದು ಬಿಟ್ಟಂತಾದರೂ ಮೋರೆಯ ಮೇಲೆ ನಗುವನ್ನು ತಂದುಕೊಂಡು ಹೇಳಿದೆ 'ಹಾಗೇ ಆಗಲಿ ಸೀನು, ನೀನೇ ತೆಗೆದುಕೊಂಡುಬಿಡು.'–'ಹಾಗಲ್ಲ ಕಿಟ್ಟು, ಚೇಷ್ಟೆಯಲ್ಲ; ನಿಜವಾಗಿ ನೀನದನ್ನು ನನಗೆ ಕೊಟ್ಟೇಬಿಡ

ಬೇಕು. ನಿನ್ನ ಸಲುವಾಗಿ ಅದೋ ನಾನು ನಿನ್ನಂತಹದೆ ಬೇರೊಂದು ಫೋಟೋ ತಂದಿದ್ದೇನೆ, ಅದನ್ನು ನೀನಿಟ್ಟುಕೋ. ಆದರೆ ನಿನ್ನದು ಮಾತ್ರ ನನಗೆ ಬೇಕು.'

* * * *

ಶ್ರೀನಿವಾಸನ ಮಾತಿನ ಅರ್ಥ ನನಗೆ ಒಡನೆಯೆ ತಿಳಿಯಲಿಲ್ಲ. ಆತನು ತಂದ ಫೋಟೋ ಯಾರದು? ಅದನ್ನು ನಾನೇಕೆ ಇಟ್ಟುಕೊಳ್ಳ ಬೇಕು? ನನ್ನದನ್ನೇ ಏಕೆ ಶ್ರೀನಿವಾಸ ಬೇಡುತ್ತಿರುವ?—ಎಂಬು ದಾವುದೂ ನನಗೆ ಹೊಳೆಯಲೆ ಇಲ್ಲ. ನನ್ನ ಬೆರಗನ್ನು ಕಂಡು ಶ್ರೀನಿ ವಾಸ ತಾನೇ ಹಿಂದು ಮುಂದನ್ನೆಲ್ಲವನ್ನೂ ತಾನು ಪಟ್ಟ ಪಾಡನ್ನೂ ಹೇಳತೊಡಗಿದ. ಆತನ ಕರುಣಾ ಸ್ವರವನ್ನೂ ಕಣ್ಣೆವೆಗಳಲ್ಲಿ ಇಣಿಕಿ ಮಿಣುಕುತ್ತಿದ್ದ ಕಣ್ಣೀರ ಹನಿಗಳನ್ನೂ ಕಂಡು, ಹೆಚ್ಚಿಗೆ ಮಾತು ಬೆಳೆಸಬೇಕೆಂದು ನನಗೆನಿಸಲಿಲ್ಲ. ಸುಮ್ಮನೆ ಶ್ರೀನಿವಾಸನ ಮಾತಿಗೆ ಒಪ್ಪಿಕೊಂಡೆ.

ಶ್ರೀನಿವಾಸನು ನನ್ನ ಫೋಟೋ ಹಾಗೂ ಅವು ಐದು ರೆಕಾ ರ್ಡುಗಳನ್ನು ಟಾಂಗಾದಲ್ಲಿಟ್ಟುಕೊಂಡು ಹೋಗುತ್ತಿರುವಾಗ ಆತನ ಮೋರೆಯಲ್ಲಿ ಎಷ್ಟೋ ದಿನ ವ್ರತ ಮಾಡಿ ಕೊನೆಗೆ ಉದ್ಯಾಪನೆ ಮಾಡಿದಂಥವರ ಕಳೆ ಬಂದು ಬಿಟ್ಟಿತ್ತು. ನಾನು ಊಟ ಮಾಡಿಕೊಂಡು ಹೋಗೆಂದು ಆತನನ್ನು ಬಹಳ ಬಲವಂತ ಪಡಿಸಿದೆ. ಕೇಳಲಿಲ್ಲ. 'ಇಲ್ಲ ಕಿಟ್ಟು, ಈಗಲೇ ಒಂಬತ್ತರ ಗಾಡಿಗೆ ಹೋಗಿ ಪದ್ಮಾನ್ನ ಕರಕೊಂಡು ಬಂದು ಬಿಡತೇನಿ' ಎಂದು ಹೇಳುತ್ತಲೇ ಹೋಗಿಬಿಟ್ಟ.

* * * *

ತಾನು ಅಷ್ಟು ಶ್ರಮದಿಂದ ಹೊಚ್ಚ ಹೊಸದಾಗಿ ಕೊಂಡು ತಂದ ಫೋಟೋ ಕೂಡ ಶ್ರೀನಿವಾಸನಿಗೆ ಮೆಚ್ಚಿಕೆಯಾಗಲಿಲ್ಲ. ಆತನಿಗೆ

ಸನ್ನದೇ ಬೇಕಾಯಿತು. ಆ ನನ್ನ ಫೋನೋದಲ್ಲಿ ಪ್ರೀತಿಯನ್ನು ಬೆಳೆಸಿಕೊಂಡು ಬಂದ ಶ್ರೀನಿವಾಸನಿಗೆ, ಅದನ್ನು ಕೊಟ್ಟು, ದುಷ್ಯಂತನಿಗೆ ಶಕುಂತಲೆಯನ್ನೊಪ್ಪಿಸಿದ ಕಣ್ವನಂತೆ ನಾನೂ ಸಮಾಧಾನತಾಳಿದೆ.

ಮತ್ತೀಗ ಶ್ರೀನಿವಾಸ ನಮ್ಮ ಮನೆಗೆ ಬರುತ್ತಲಿದ್ದಾನೆ. ಬೇಕಾದಷ್ಟು ಮಾತುಕಥೆಯಾಡುತ್ತಲಿದ್ದಾನೆ. ಆದರೂ ತೀರ ಮೊದಲಿನಂತಲ್ಲ. ಈಗೇನು! ಆತನ ಪ್ರೀತಿಯ ವಸ್ತು ಆತನಲ್ಲಿಯೇ ಇದೆ.

ನನ್ನಿಂದ ಫೋನೋ ಒಯ್ದ ಮೇಲೆ ಶ್ರೀನಿವಾಸನು ಅದನ್ನು ಯಾರ ಕಣ್ಣಿಗೂ ಹಾಕಿಲ್ಲ. ಘೋಷಾದ ಹೆಂಡತಿಯಂಬಂತೆ ಅದನ್ನು ಒಳಗೇ ಇಟ್ಟಿರುತ್ತಾನೆ. ಅದನ್ನು ಕೇಳುವದಕ್ಕೆ ನನಗೆ ಕೂಡ ಅಡ್ಡಿ! ಒಂದು ಫೋನೋದ ಬಗ್ಗೆ ಶ್ರೀನಿವಾಸನಿಗೆ ಅದೆಷ್ಟು ಮೋಹ! ಅಥವಾ—'ತನ್ನಲ್ಲಿ ಫೋನೋ ಇರುವದೆಂದು ಯಾರಿಗಾದರೂ ತಿಳಿದು ಅವರು ಅದನ್ನೊಯ್ದ ಮೇಲೆ ತಾನು ಅದನ್ನು ತಿರುಗಿ ತರುವಾಗ ಅವರಿಗೂ ತನ್ನಂತೆಯೆ ತಳಮಳವಾದೀತು! ಅದಕ್ಕೆ ಅದನ್ನು ಯಾರಿಗೂ ತೋರಿಸುವದೇ ಬೇಡ' ಎಂಬ ಭಾವನೆಯಿಂದಲೂ ಇರಬಹುದು—ಶ್ರೀನಿವಾಸ— ಆ ತನ್ನ ದ್ವಿತೀಯ ಪತ್ನಿಯನ್ನು ಅಡಗಿಸಿಯೆ ಇಟ್ಟಿರುತ್ತಾನೆ.

ಆದರೂ, ಇರುಳು, ಜಗತ್ತೆಲ್ಲ ಶಾಂತವಾದ ಮೇಲೆ ಆತನ ಕಿಡಿಕಿಯಲ್ಲಿ ಹಣಿಕಿ ಹಾಕಿದರೆ, ಮಂಚದ ಮೇಲೆ ಶ್ರೀನಿವಾಸನು ಪದ್ಮಾನ ಮೈಗೆ ಒರಗಿಕೊಂಡಾಗಲಿ, ಪದ್ಮಾನು ಶ್ರೀನಿವಾಸನಿಗೆ ಒರಗಿಕೊಂಡಾಗಲಿ ಕುಳಿತು ಫೋನೋ ಹಚ್ಚುತ್ತಿರುವದನ್ನು ಕಾಣಬಹುದು.

ಇಂದಿಗೂ ಶ್ರೀನಿವಾಸನ ಬಳಿಯಲ್ಲಿರುವವು ನನ್ನ ಐದೇ ರೆಕಾರ್ಡು ಗಳು.

* * * *

ಈ ಬಾಳಿನಲ್ಲಿ ಸುಖವಿದೆ; ಅದಕ್ಕಿಂತ ಹೆಚ್ಚಾಗಿ ದುಃಖವಿದೆ. ಆದರೆ ಈ ಸಂಸಾರದ ಸುಖದುಃಖಗಳ ಮೇರೆಯನ್ನು ಮೀರಿ ಆನಂದ ವಿದೆ. ಆ ಆನಂದದ ನೆರವುಗೈಯನ್ನು ಹಿಡಿದು ಮನುಷ್ಯನು ಸಂಸಾರ ಸಾಗರದ ಸುಖದುಃಖಗಳ ತೆರೆಗಳ ಮೇಲೆ ಮೆಲ್ಲನೆ ತೇಲಿಹೋ ಗುತ್ತಾನೆ.

ಮನುಷ್ಯನಿಗೆ ಈ ಆನಂದವು ಹಲವು ಬಗೆಯಾಗಿ ತೋರ್ಪಡಿಸಿ ಕೊಳ್ಳುವದು. ನವವಿಧ ಭಕ್ತಿಗಳಿಂದ ಇದನ್ನು ಹೊಂದಿದವರುಂಟು. ಗಂಡಹೆಂಡಿರ ಪ್ರೇಮದಲ್ಲಿ, ತಾಯಿಮಕ್ಕಳ ಅಕ್ಕರತೆಯಲ್ಲಿ, ಗೆಳೆಗೆಳೆ ಯರ ಪ್ರೀತಿಯಲ್ಲಿ, ಈ ಆನಂದವು ಒಡಮೂಡಿಕೊಳ್ಳುವದುಂಟು. ಇದಕ್ಕಾಗಿಯೆ ಮನುಷ್ಯ ಮನುಷ್ಯರು ಒಲಿಯುವರು; ಪ್ರೀತಿಸು ವರು. ಹಾಗೆಯೆ ಮನುಷ್ಯರು ಪಶುಪಕ್ಷಿಗಳಲ್ಲಿ ಕೂಡ ಮಮತೆ ಯನ್ನಿಟ್ಟುಕೊಂಡಿರುವದನ್ನೂ ನಾವೆಲ್ಲ ಬಲ್ಲೆವು. ಹೀಗಿದ್ದರೂ ಶ್ರೀನಿ ವಾಸನಂತಹ ಈ ಹುಚ್ಚು ಮಾತ್ರ ಹೊಸ ಮಾದರಿಯದೇ! ಆದರೆ ಆತನಿಗೆ ಸಂಗೀತವೇ ಸಚ್ಚಿದಾನಂದದ ನಿವಾಸವಾಗಿ ತೋರುತ್ತಿರ ಬಹುದು. ಅದಕ್ಕಾಗಿಯೇ ಇದ್ದೀತು–ಶ್ರೀನಿವಾಸನು ಮೂರ್ತಿ ಪೂಜಕನಂತೆ, ತನ್ನ ಆನಂದದ ಕುರುಹಿನಂತಿದ್ದ ನನ್ನ ಫೋನೋ ವನ್ನು ಪ್ರೀತಿಸುತ್ತಿದ್ದಾನೆ. ಯಾರು ಬಲ್ಲರು! ನನ್ನ ಫೋನೋ ದಿಂದ ಶ್ರೀನಿವಾಸನಿಗೆ ಎನಿಸುತ್ತಿದ್ದ ಆನಂದವೂ **ಆತನ** ಆವಿಷ್ಕಾರವೇ ಇರಬಹುದು!

# ಮಾಧೂರಾಯನ ಮಂಕು

೧

ಶ್ರೀರಂಗಪಟ್ಟಣದಲ್ಲಿ ಒಂದು ಖಟ್ಲೆಯ ಕೆಲಸವಿತ್ತು ಎಂದು ಮಾಧೂರಾಯನು ಬೆಂಗಳೂರಿನಿಂದ ರಾತ್ರಿ ಮೈಸೂರು ಪ್ಯಾಸೆಂಜರ ದಲ್ಲಿ ಹೊರಟನು. ಸಂಗಡ ವಿಶೇಷ ಗಂಟುಗದಡಿಯೇನಿರಲಿಲ್ಲ. ಏತ ಕ್ಕಿರಬೇಕು? ವಕೀಲಿ ಠೀವಿನಿಂದ ಹೊರಟಿದ್ದರಿಂದ, ಒಂದು ಸೂಟ್ ಕೇಸು, ಒಂದು ಪೋರ್ಟಮ್ಯಾಂಟೋ ಎರಡೇ ಇದ್ದವು. ಪ್ಯಾಸೆಂ ಜರದಲ್ಲಿ ಇಂಟರ ಡಬ್ಬಿಗಳಿರದ್ದರಿಂದ— ಮಾಧೂರಾಯನು ಕಲಿತವರ ಐಟಿಗೊಪ್ಪುವಂತೆ ಥರ್ಡಕ್ಲಾಸಿನದೇ ಒಂದು ಚಿಕ್ಕ ಕಂಪಾರ್ಟ ಮೆಂಟು ಹುಡುಕಿಕೊಂಡು ಕುಳಿತಿದ್ದನು.

ಪ್ಯಾಸೆಂಜರದಲ್ಲಿ ಅಂದು ಗದ್ದಲ ವಿಶೇಷವಾಗಿತ್ತು. ಮಾಧೂ ರಾಯನ ಕಂಪಾರ್ಟಮೆಂಟು ಆರೇ ಜನರದಿದ್ದರೂ ಅದರಲ್ಲಿ೧೦ ಜನರು ತುಂಬಿಕೊಂಡಿದ್ದರು. ಈ ಗದ್ದಲದಲ್ಲಿ ಇಡೀ ರಾತ್ರಿಯನ್ನು ಕಳೆಯುವ ಬಗೆಯೆಂತು ಎಂದು ಮಾಧವರಾಯನಿಗೆ ದುಗುದುಗಿ ಹತ್ತಿತು. ಬೆಳು ದಿಂಗಳ ದಿನಗಳಾಗಿದ್ದರೆ ಸೃಷ್ಟಿಸೌಂದರ್ಯದ ಬೆಡಗಿನಿಂದಲಾದರೂ ಮನವನ್ನು ರಮಿಸಿಕೊಳ್ಳಬಹುದಿತ್ತು. ಅದು ಇಲ್ಲ. ಎಲ್ಲೆಲ್ಲೂ ಕಾರ್ಗತ್ತಲೆ; ಮೇಲೆ ಜಡಿಮಳೆಯ ಜಿನುಗು. ಬಿಡದಿಯವರೆಗೆ ಮುಟ್ಟು ವಷ್ಟರಲ್ಲಿ ತಲೆಚಿಟ್ಟು ಹಿಡಿದುಹೋಯಿತು. ಅದರಲ್ಲಿಯೂ ಗಾಡಿಯು, ನಡೆಯಲೋ ಬೇಡವೋ ಎಂನುತ್ತ ಕಿತ್ತಲಾರದೆ ಕಾಲು ಕಿತ್ತಿಹಾಕು ತ್ತಿತ್ತು. ಅಂತೂ ಮಾಧೂರಾಯನ ಪ್ರಯಾಣ ಮುಹೂರ್ತದ

ಗ್ರಹವೂ ಗಾಡಿಯ ಪ್ರಯಾಣ ಮುಹೂರ್ತದ ಗ್ರಹವೂ ಒಂದರ ಮೇಲೊಂದು ವಕ್ರಿಸಿಕೊಂಡಿದ್ದವು.

ಅಂತಹದರಲ್ಲಿಯೂ, ಮಾಧೂರಾಯನಿಗೆ ಒಲ್ಲೆ ಒಲ್ಲೆನೆನ್ನುತ್ತಲೇ ಜಂಪು ಬರುತ್ತಿದ್ದಿತು. ಹೀಗಿರುವಾಗಲೇ, 'ಮದ್ದೂರು' 'ಮದ್ದೂರು' ಎಂಬ ಸ್ಟೇಶನ್ ಜವಾನನ ನಿಡುಸರದ ಕೂಗು ಮಾಧವರಾಯನನ್ನು ಬಡಿದೆಬ್ಬಿಸಿತು. ಕೂಡಲೆ ಒಂದು ಬಗೆಯ ಸಂತಸದಿಂದ ಮಾಧೂರಾಯನು ಪುಟಿದೆದ್ದು ಕುಳಿತುಕೊಂಡ. ಆಗ ಸರಿಯಾಗಿ ಮಧ್ಯರಾತ್ರಿಯ ಎರಡು ಗಂಟೆ.

ಗಾಡಿಯು ನಿಲ್ಲುತ್ತಲೆ, ಕಂಪಾರ್ಟಮೆಂಟಿನಲ್ಲಿ ಕುಳಿತ ಜನರೆಲ್ಲರೂ ಇಳಿದು ಹೋಗಿ ಬಿಟ್ಟರು. ಮಾಧೂರಾಯನು ಒಬ್ಬನೇ ಒಬ್ಬನಾಗಿ ಆ ಮಿಟಿಮಿಟಿ ಸ್ವರ್ಗದಲ್ಲಿ ಕುಳಿತುಕೊಂಡ. ಮೇಲೆ ಗಾಡಿಯೂ ಬೇಗ ಮುಂದೆ ಸಾಗಲೊಲ್ಲದು. ಬೆಂಗಳೂರು ಪ್ಯಾಸೆಂಜರು ಲೇಟಾಗಿದ್ದರಿಂದ, ಅದಕ್ಕಾಗಿ ಮಾಧೂರಾಯನ ಗಾಡಿ ದಾರಿಕಾಯಬೇಕಾಗಿತ್ತು.

ಮದ್ದೂರಿನ ವರೆಗೂ ಮಿತಿಮೀರಿದ ಗದ್ದಲದಿಂದ ಒಂದು ಬಗೆಯಾಗಿ ಕೋಟಲೆಗೊಂಡ ಮಾಧೂರಾಯನ ಮನಸ್ಸು ಈಗ ನಟ್ಟಿರುಳಲ್ಲಿ ರಣಗುಟ್ಟುವ ಆ ಕಂಪಾರ್ಟಮೆಂಟಿನಲ್ಲಿ ಕುಳಿತು ಮೊದಲಿಗಿಂತ ಹೆಚ್ಚಾಗಿ ಚಡಪಡಿಸಹತ್ತಿತು. ಆ ಮೊದಲೇ, ತಂನದು ಮದುವೆಯಾಗಿ ಬಿಟ್ಟಿದ್ದರೆ, ಆ ಮದುವೆಯಾದವಳು ಆಗ ತಂನ ಬದಿಯಲ್ಲೇ ಇದ್ದರೆ, ಅಂದಿನ ರಣಗುಟ್ಟುವ ರಾತ್ರಿ ಎಷ್ಟು ರಸಮಯವಾಗಿರುತ್ತಿತ್ತಲ್ಲ ಎಂದು ಮಾಧೂರಾಯನು ಭಾವಿಸಿಕೊಂಡ. ಹೊಸ ಹರೆಯದಲ್ಲಿದ್ದ ಆತನ ಹೃದಯದ ಹಂಬಲವು ಅಂದಿನ ಆ ಕಾರಿರುಳ ಕಪ್ಪು

ಮೋಡಗಳ ಒಡಲನ್ನು ಸೀಳಿ, ಆಚೆಗಿದ್ದ ಯಾವುದೋ ಒಂದು ಬೆಳಕನ್ನು ಕಾಣಲು ಹವಣಿಸುತ್ತಿತ್ತು.

೨

ಮಾಧೂರಾಯನ ಮನದಲ್ಲಿ ಹೀಗೆ ಭಾವನೆಗಳು ಜೋಕಾಲಿ ಯಾಡುತ್ತಿರುವಾಗಲೆ, ಆತ ಕಿಡಕಿಯೊಳಗಿಂದ ಹೊರಗೆ ಹಣಿಕಿ ಹಾಕಿದ. ಅದೇ ಹೊತ್ತಿಗೆ ಹಸುರು ಕಾಶ್ಮೀರೀ ಶಾಲಂನು ಹೊದ್ದು ಕೊಂಡ ಹೆಂಗುಸೊಬ್ಬಳು, ಎಡ ಕೈಯಲ್ಲಿ ಚಿಕ್ಕ ಹ್ಯಾಂಡಬ್ಯಾಗ್ ಒಂದನ್ನು ಹಿಡಿದುಕೊಂಡು, ಡಬ್ಬಿಗಳಲ್ಲಿ ಸ್ಥಳವನ್ನು ಹುಡುಕುತ್ತ ಅಲೆ ದಾಡುತ್ತಿದ್ದಳು. ಅವಳು ಉಟ್ಟದ್ದು ಗುಲಾಬೀ ಬಣ್ಣದ ಬನಾರಸದ ರೇಶ್ಮೀ ಜರದ ಪತ್ತಲ; ಕಾಲಲ್ಲಿ ಚೂಪಮೂಗಿನ ಹತ್ತಿಯಾದ ಮುಗಿಲು ಬಣ್ಣದ ಶೂ; ಬಲಗೈಯಲ್ಲಿ ಒಂದು ಕೊಡೆ. ಸಂಗಡ ಕಳಿ ಸುವದಕ್ಕಾಗಿ ಬಂದ ಒಬ್ಬ ಆಳು.

ಡಬ್ಬಿಗಳ ಕಿಡಕಿಗಳಲ್ಲಿ ಹಣ್ಣಿಕಿ ಹಾಕುತ್ತ ಅಲೆದಾಡುತ್ತಿದ್ದವಳು ಮಾಧೂರಾಯನ ಕಂಪಾರ್ಟಮೆಂಟಿನ ಹತ್ತರವೇ ಬಂದಳು. ಆಗ ಅವರಿಬ್ಬರ ಕಣ್ಣುಗಳು ಕಲೆತವು. ಆದರೆ ಅವಳು ಅದನ್ನು ದಾಟಿ, ಹಾಗೆಯೆ ಮುಂದೆ ಸಾಗಿದಳು. ಅವಳ ಕಣ್ಣೊಡನೆ ತನ್ನ ಕಣ್ಣು ಕೂಡಿದಾಗಲೆ, ಮಾಧೂರಾಯನ ಮನಸು ಹಿಡಿದುಬಿಟ್ಟಂತಾಯಿತು. ಆದರೆ ಅವಳು ಮುಂದೆ ಸಾಗಿ ಹೋದದ್ದರಿಂದ ಆ ಮನಃಸ್ಥಿತಿಯು ಬೇಗ ಬಯಲಾಯಿತು. ಆದರೂ ಒಂದು ಕುತೂಹಲ. ಮಾಧೂ ರಾಯನು ಮತ್ತೊಮ್ಮೆ ಹೊರಕ್ಕೆ ಬಗ್ಗಿ ನೋಡಿದ. ಅಷ್ಟೊತ್ತಿಗೆ ಮುಂದೆ ಹೋಗುತ್ತಿದ್ದ ಅವಳು ಮತ್ತೆ ಹಿಂದಿರುಗಿದ್ದಳು. ಮಾಧೂ ರಾಯನಿಗೆ ಮತ್ತೆ ಮೈಮನಸ್ಸೆಲ್ಲ ಜುಮ್ಮೆಂದಿತು. ಆ ಹೆಣ್ಣು

ಮಗಳು ಹಿಂದಿರುಗಿ ಬರುತ್ತಿದ್ದಂತೆಯೇ ಮಾಧೂರಾಯನ ಕಂಪಾರ್ಟಮೆಂಟಿನ ಹತ್ತರವೇ ಬಂದು, ಈ ಸಲ ಒಳಗೊಂಮೆ ಹಣಿಕಿಹಾಕಿ ನೋಡಿಯೇ ಬಿಟ್ಟಳು. ಮಾಧೂರಾಯನ ಮೈಯಲ್ಲಿ ಬಲವಾದ ನಡುಕ ಹುಟ್ಟಿತು. ಒಂಮೆಲೆ ತಂನಂನು ಯಾರೋ ಹಿಡಿದು ಮೂಲೆ ಗೊತ್ತುತ್ತಿರುವಂತೆ ಎನಿಸಿತು. ಆದರೆ ಅಷ್ಟರಲ್ಲಿ ಆ ಹೆಂಗಸು ಮತ್ತೆ ಮುಂದುವರಿದಳು. ಮಾಧೂರಾಯನಿಗೆ ಕೂಡಲೇ ಮೊದಲಿನಂತೆ ಉಸಿರು ಆಡತೊಡಗಿತು. ಅರಿಷ್ಟ ಹೋಯಿತು, ಇಂನುಮೇಲೆ ಹೊರಗೆ ಕಂಣು ಹಾಕುವದು ಕೂಡ ಬೇಡವೆಂದೆಂದುಕೊಂಡು, ಗಾಡಿಯ ಇನ್ನೊಂದು ಮಗ್ಗಲಿನ ಕಿಡಕಿಯ ಹತ್ತರ ಹೋಗಿ ಕುಳಿತುಕೊಂಡ.

ಆದರೆ ಕಳ್ಳಮನಸು ಕೇಳೀತೇ ? ಆ ಹೆಂಗಸಿನ ಹಿಂದೆಯೇ ಹರಿದಾಡುತ್ತಿತ್ತು. 'ಆದದ್ದಾಗಲಿ ಇನ್ನೊಂಮೆ ಪ್ಲಾಟಫಾರ್ಮ್‌ನ ಕಿಡಕಿಗೆ ಹೋಗಿ ಹಣಿಕಿ ಹಾಕಿ ನೋಡಿ ಬಿಡೋಣ; ಒಬ್ಬ ಹೆಂಗಸಿಗೇಕೆ ಇಷ್ಟು ಹೆದರಿಕೆ. ಅವಳೇನು ರಾಕ್ಷಸವೇ; ಭೂತವೇ ; ಒಬ್ಬ ಹೆಂಗಸು. ಅದರಲ್ಲೂ ಒಳ್ಳೇ ಚೆಲುವೆಯಾಗಿದ್ದಂತೆ ಕಾಣುವದು. ಅದೇನೋ ಹೇಳುತ್ತಾನಲ್ಲ ಒಬ್ಬ ಕವಿ:— "ಹಾದಿಯನು ಹಿಡಿದು ಹೋಗುತಲಿರುವ ಹುಡುಗಿಯರ। ಬೀದಿಯವರಾಬಾಲವೃದ್ಧರೆಲ್ಲಾ॥ ಹೋದ ಹಾಗೆಯೆ ತಿರುಗಿ ಇನ್ನೊಮ್ಮೆ ನೋಡುವರು। **ಯಾದವಾ** ಇದು **ನೀನು** ಎಳೆದ ದಾರಿ" ಎಂದಮೇಲೆ ಮನುಷ್ಯರಿಗೆ ಇಷ್ಟು ಸಹಜವಾಗಿರುವ ಭಾವನೆಗಳಿಗೆ ನಾನೇಕೆ ಭಯಪಡಬೇಕು ?' ಎಂದು ಬಗೆಯುತ್ತ ಈಚೆಗೆ ಮೋರೆ ತಿರುವುವ ಹೊತ್ತಿಗೆ ಸರಿಯಾಗಿ ಆ ಹೆಂಣುಮಗಳು, ಆ ಕಂಪಾರ್ಟಮೆಂಟಿನ ಬಳಿಯಲ್ಲೇ ನಿಂತುಕೊಂಡಿದ್ದಳು. ಆಳು ಬಾಗಿಲು ತೆಗೆಯಲು ಯತ್ನಿಸುತ್ತಿದ್ದ. ಮಾಧೂರಾಯನ ಎದೆ

ಯಲ್ಲಿ ತಣ್ಣೀರು ಸುರುವಿದಂತಾಗಿ, ಆತನ ದೃಗ್ವಾಕ್‌ಶಕ್ತಿಗಳು ಒಮ್ಮೆಲೇ ಕುಂಠಿತವಾದಂತೆನಿಸಿತು.

ಆ ಹೆಂಣುಮಗಳು ಒಳಗೆ ಬರುವಾಗ, "ದಯವಿಟ್ಟು ಕ್ಷಮಿಸಿ, ನಾನು ತಮಗೆ ತೊಂದರೆ ಕೊಟ್ಟೆ" ಎಂದು ಇಂಗ್ಲೀಷದಲ್ಲಿ ಹೇಳುತ್ತ, ತನ್ನ ಕೈಯಲ್ಲಿದ್ದ ಒಡವೆಗಳನ್ನು ಒತ್ತಟ್ಟಿಗೆ ಓರಣಿಸಿಟ್ಟು, ತಾನು ಬಂದ ಬಾಗಿಲಬಳಿಯ ಕಿಡಕಿಯ ಹತ್ತಿರವೇ ಕುಳಿತುಕೊಂಡಳು. ಮಾಧೂರಾಯನಿಗೆ ಅವಳ ಮಾತಿಗೆ ಮಾರ್ನುಡಿಗೊಡುವದಾಗಲೆ ಇಲ್ಲ. ಕೆಲಹೊತ್ತು ಸುಂಮನೆ ಅವಳಂನು ನೋಡುತ್ತಿದ್ದು ಆಮೇಲೆ ಕಿಡಕಿಯಹೊರಗೆ ಮೋರೆ ಹಾಕಿಕೊಂಡು ಕುಳಿತುಬಿಟ್ಟನು. ಹೀಗೆ ಈಚೆಯ ಕಿಡಕಿಗೊಬ್ಬರು ಆಚೆಯ ಕಿಡಕಿಗೊಬ್ಬರಾಗಿ ಅವರಿಬ್ಬರು ಮೌನಗೌರಿಯ ವ್ರತ ಧರಿಸಿ ಕುಳಿತುಕೊಂಡರು.

೩

ಆ ಹೆಣ್ಣುಮಗಳು ಅತಿ ಚೆಲುವೆ. ಮೈತುಂಬೆಲ್ಲ ಒಂದು ತೆರದ ವಿಲಾಸವಿದೆ. ಮೋರೆಯ ಕಳೆಯಲ್ಲಿ ಬೇಕಾದಷ್ಟು ಒಸಪು. ತಿದ್ದಿ ಮಾಡಿದ ಮಾಟ. ಸ್ವಲ್ಪ ಎತ್ತರವಾದ ನಿಲುವು. ತುಂಬಿದ ಮೈ ಕೈಗಳು. ಹರೆಯದ ಭರದಲ್ಲಿದ್ದ ಹೆಣ್ಣು. ವಯಸ್ಸು ಸುಮಾರು ಇಪ್ಪತ್ತೈದು ಇರಬಹುದು.

ಒಳಗೆ ಬರುವಾಗ, ಆ ಹೆಂಗಸು ಮಾಧೂರಾಯನ ಕ್ಷಮಾ ಯಾಚನೆ ಮಾಡಿಕೊಂಡ ಮೇಲೆ, ಆತನು ವ್ಯಕ್ತವಾಗಿ ಉತ್ಸಾಹ ವನ್ನು ತೋರದ್ದರಿಂದ ಅವಳು ತನ್ನಷ್ಟಕ್ಕೆ ತಾನು ಕುಳಿತುಬಿಟ್ಟಳು.

ಆದರೆ ಇತ್ತ ಮಾಧೂರಾಯನ ಮನದ ಹಲವು ಎಣಿಕೆಗಳು ಜೋಲೀಹೊಡೆಯುತ್ತ ನಿಟ್ಟುಗೆಟ್ಟು ಸಾಗಿದ್ದವು. ಆ ಹೆಣ್ಣುಮಗಳು

ಬಳಗೆ ಒಂದು ಕುಳಿತೊಡನೆ ಆತನ ಎದೆಯು ಬಲವಾಗಿ ಹೊಡೆದು ಕೊಳ್ಳಹತ್ತಿತು. ಚಿತ್ತವೆಲ್ಲ ಚಂಚಲವಾಯಿತು. ಹೀಗಾಗಿ ಏನಾದ ರೊಂದು ನೆವದಿಂದ, ಸುಮ್ಮಸುಮ್ಮನೆ ಕ್ರಾಪ್ ತಿದ್ದಿಕೊಳ್ಳುವದು, ಕಾಲರು ಸರಿಮಾಡಿಕೊಳ್ಳುವದು, ಪ್ಯಾಂಟು ಜಾಡಿಸಿಕೊಳ್ಳುವದು ಮುಂತಾದ ಕಾರ್ಯಕಲಾಪದಲ್ಲಿ ತೊಡಗಿದ. ಆದರೆ ಮೋರೆಯನ್ನು ಈಚೆಗೆ ತಿರುಗಿಸಲೊಲ್ಲ. ಮನಸು ಮಾತ್ರ ಭ್ರಮರದಂತೆ ಆ ಹೆಣ್ಣು ಮಗಳ ಬಳಿಯಲ್ಲೇ ಭ್ರಮಿಸುತ್ತಿತ್ತು. ಆ ಮನಸಿನ ಬೆನ್ನುಹತ್ತಿ ಕಂಗೋಟವೂ ಒಮ್ಮೊಮ್ಮೆ ಕಳವಿನಿಂದ ಅವಳನ್ನು ಮುಟ್ಟಿ ತಟ್ಟಿ ಮಿಂಚಿಸಂತೆ ಮತ್ತೆ ಮಾಯವಾಗುತ್ತಿತ್ತು. ಆದರೂ ಚೆನ್ನಾಗಿ ದಿಟ್ಟಿಸಿ ನೋಡೇನೆಂಬ ಧೈರ್ಯವಿಲ್ಲ. ಏಕೆಂದರೆ ಮಾಧೂರಾಯನು 'ಸ್ತ್ರೀಭೀರುವಾಗಿದ್ದ.'

ಪ್ರತಿಯೊಂದು ಸ್ಟೇಶನದಲ್ಲೂ ಮತ್ತೂ ಯಾರಾದರೂ ಸಂಗಾತಿ ಗಳು ಒಂದಾರೇ ಎಂದು ಮಾಧೂರಾಯನು ಬಲು ಹವಣಿಸಿ ದಾರಿ ಕಾಯುತ್ತಲಿದ್ದರೂ, ಮದ್ದೂರು ಬಿಟ್ಟ ಮೇಲೆ ಒಂದು ಜೀವಜಂತು ವೇನು ಆ ಕಂಪಾರ್ಟಮೆಂಟಿನ ಬಳಿ ಸುಳಿಯಲಿಲ್ಲ. ಅಂದು ಆ ಕಟ್ಟಿ ರುಳಿನಲ್ಲಿ ಆ ಇಕ್ಕಟ್ಟಿನ ಕಂಪಾರ್ಟಮೆಂಟಿನಲ್ಲಿ ಇರುವವರು ಇಬ್ಬರೇ– ಆ ಹೆಂಗಸೊಬ್ಬಳು; ಆ ಗಂಡಸೊಬ್ಬ.

ಮೊದಲು ಕೆಲಹೊತ್ತು ಆ ಹೆಣ್ಣುಮಗಳು ನಿರ್ಲಿಪ್ತಳಾಗಿ ಕುಳಿತಿದ್ದಳೇನೋ ನಿಜ. ಆದರೆ ಬಹಳ ಹೊತ್ತು ಹಾಗೆಯೆ ಇರಲಾ ರದೆ ಅವಳು ತನ್ನ ಚಟುವಟಿಕೆಗಳ ಚಳವಳಿಯನ್ನೇ ಎಬ್ಬಿಸಿದಳು. ಮೊದಲು ಸೀರೆಯ ಸೆರಗನ್ನು ಸರಿಪಡಿಸುವ ಸರಭರ ಸಪ್ಪಳದಿಂದ ಚಳವಳಿಯು ಆರಂಭವಾಯಿತು. ಅನಂತರ ಕಾಲುಗಳನ್ನು ಆಚೆಗೂ

ಈಚೆಗೂ ಎತ್ತಿಡುತ್ತಿರುವಾಗಿನ ಬೂಟಿನ ಸಪ್ಪಳ. ನಂತರ, ಕಿಡಕಿಯ ಬಾಗಿಲಗಳನ್ನು, ಒಂದು ತೆರೆದು ಇನ್ನೊಂದು ಇಕ್ಕುವದು, ಅದನ್ನು ಇಕ್ಕಿ ಮತ್ತೊಂದು ತೆರೆಯುವದು ಇತ್ಯಾದಿ ಖಟಾಟೋಪ. ಅಷ್ಟಕ್ಕೂ ಮುಗಿಯದೆ ಒದಿಯಲ್ಲಿದ್ದ ಹ್ಯಾಂಡಬ್ಯಾಗನ್ನು ತೆಗೆದು ಯಾವುದೋ ಒಂದು ಪುಸ್ತಕವನ್ನೆತ್ತಿಕೊಂಡಳು. ಆದರೆ ಮರು ನಿಮಿಷದಲ್ಲೇ ಆ ಪುಸ್ತಕವು ತನ್ನ ನಿಜಸ್ಥಾನವನ್ನು ಸೇರಿಬಿಟ್ಟಿತು. ಆದರೂ ಸಾಲಲಿಲ್ಲ. ತಾನು ಕುಳಿತಲ್ಲಿಂದ ಎದ್ದು ಎದುರಿನ ಬಾಕಿನ ಮೇಲೆ ಕುಳಿತಳು. ಹೀಗೆ ಆ ಹೆಂಣುಮಗಳು ನಡೆಸಿದ ಚಳವಳಿ ಯೊಡನೆ ಅವಳ ಕೈಬಳೆಗಳಂತೂ ತಾಳ ಕುಟ್ಟುತ್ತಲೆ ಇದ್ದವು.

ಇತ್ತ ಮಾಧೂರಾಯನ ಎದೆಯೂ ಆ ತಾಳದ ಲಯದಲ್ಲಿ ಲಯವಾಗಿ ಹಾರುತ್ತಲಿದ್ದಿತು. ಇಷ್ಟು ಹೊತ್ತಿನವರೆಗೆ ಮೈತುಂಬ ಏರಿಬರುತ್ತಲಿದ್ದ ಜಂಪಿನ ಜೋರು, ಅಂದಿನ ಕಾರ್ಗತ್ತಲೆಯಲ್ಲಿಯೂ ಮಾಧೂರಾಯನ ಕಣ್ಣೆದುರಿಗೆ ಮೈದೋರಿದ ಹೊಸಬಗೆಯ ತೇಜಃ ಪುಂಜವಾದ ಒಂದು ಪ್ರಕಾಶಕ್ಕೆ ಬೆದರಿ ಹೇಳದೆ ಕೇಳದೆ ಹಿಂಜಾರಿ ಹೋಯಿತು.

ಅವಳ ತಲೆಯಲ್ಲಿ ಮತ್ತೇನು ಹುಳಗಳಿದ್ದವೊ ಯಾರು ಬಲ್ಲರು ! ಇರುಇರುತ್ತಲೆ, ಆ ಹೆಂಣುಮಗಳು ಕಿಡಕಿಯಲ್ಲಿ ಮೋರೆ ಹಾಕಿ ಕೊಂಡು ಕುಳಿತು, ಸುಳಿದು ಬರುತ್ತಿರುವ ಗಾಳಿಯ ಸೂರಿನಲ್ಲಿ ತನ್ನ ರಾಗವನ್ನು ಬೆರೆಸಿ ಮೆಲ್ಲನೆ ಕಳ್ಳದನಿಯಿಂದ ಕೊರಳಿನಲ್ಲೇ ಹಾಡ ತೊಡಗಿದಳು. ಹಾಡು ಎಲ್ಲರಿಗೂ ಪರಿಚಿತವಾದ ತೀರ ಸಾಮಾನ್ಯ ವಾದ ‘ ಇಂಥಾ ಮೂರ್ತಿ ಕಂಣಾಮುಂದೆ ನಿಂತಿದಂತಿದೆ– ’ ಎಂಬುದು. ಆದರೂ ಆ ಹಾಡು ನಮ್ಮ ಮಾಧವಮೂರ್ತಿಗೆ ನವೋನವವಾಗಿ

ಎನಿಸಿ ಅದರಲ್ಲಿ ಯಾವುದೋ ಒಂದು ಹೊಸ ಅರ್ಥವು ಹೊಳೆದಂತಾಯಿತು. ಮಾಧೂರಾಯನು ಕಿವಿಗೊಟ್ಟು ಆಲಿಸತೊಡಗಿದನು. ಕಳ್ಳದನಿಯ ಹಾಡಾದರೂ, ಆತನಿಗೆ ಪ್ರತಿಯೊಂದು ವರ್ಣವೂ, ಆಲಾಪವೂ, ಸ್ಪಷ್ಟವಾಗಿ ಕೇಳಬರುತ್ತಿದ್ದವು. ಅಂತೆಯೆ ಆತನು ಮನಸ್ಸು ಬಿಚ್ಚಿ ಹಾಡನ್ನು ಲಾಲಿಸ ತೊಡಗಿದನು. ಆಮೇಲೆ ಸ್ವಲ್ಪ ಹೊತ್ತಿನಲ್ಲಿ, ಕಳ್ಳದನಿಗೆ ಮರುಳಾದ ಮನಸಿನ ಮರೆಯಲ್ಲಡಗಿ ಆತನ ಕಂಣುಗಳೂ ಅವಳನ್ನು ಮೆಲ್ಲನೆ ಮಾಲಿಸತೊಡಗಿದವು.

ಮೊದಲೇ ಹೆಂಣುದನಿ. ಮೇಲೆ ಒಳ್ಳೇ ಸುರಿತ ಕೊರಳು. ಗಾನವು ಬಲು ಇಂಪಾಗಿತ್ತು. ಅದರಲ್ಲಿಯೂ ಮಧ್ಯರಾತ್ರಿಯ ಶಾಂತತೆ. ಉಗಿಬಂಡಿಯು ಕೂಡ ಆ ಗಾನಕ್ಕೆ ಮನಸೋತು, ಅದರ ತಾಲದಂತೆಯೇ ಹೆಜ್ಜೆಹಾಕುವದೇನೋ ಎನ್ನಿಸಿತು. ಆ ಗಾಯನದ ಮಧುಮಂಜುಳನಿನಾದದಿಂದ ಮಾಧೂರಾಯನ ಹೃದಯವು ಮೆಲ್ಲನೆ ಅರಳಹತ್ತಿತು. ಒಂದು ಬಗೆಯ ಅರೆಮರೆವು ಮೈಯಲ್ಲೆಲ್ಲ ತುಂಬಿಕೊಳ್ಳಹತ್ತಿತು. ಆ ಅರೆಮರೆವಿನಲ್ಲಿ ಮುಳುಗಿ ಕಣ್ಣುಗಳನ್ನು ಹಾಯಾಗಿ ಮುಚ್ಚಿಕೊಂಡು ಆ ಗಾನವನ್ನು ಕೇಳುತ್ತಲಿದ್ದಾಗ, ಮಾಧೂರಾಯನಿಗೆ, ಸಚ್ಚಿದಾನಂದ ಸ್ವರೂಪಿಣಿಯಾದ ಪ್ರಕೃತಿಮಾತೆಯೇ, ಮೈಗೊಂಡು, ಯಾವುದೋ ಒಂದು ಅತ್ಯುನ್ನತವಾದ ಶಿಖರವನ್ನೇರಿ ಕುಳಿತು, ತನ್ನ ಸೃಷ್ಟಿಯ ಸೊಬಗನ್ನು ಸವಿಗೊಳಿಸುವದಕ್ಕಾಗಿ, ಸುಳಿಗಾಳಿಯಲೆಗಳಗುಂಟ, ಅಮೃತಗಾನವನ್ನು ಚಿರಪ್ರವಾಹವಾಗಿ ಹರಿಸುತ್ತಲಿರುವಂತೆ ಕಾಣಿಸಹತ್ತಿತು. ಅಂದು ಆತನ ಕಿವಿಯಲ್ಲಿಳಿದು ಮನದಲ್ಲಿ ಸುಳಿದು ಹೃದಯದಲ್ಲಿ ನಲಿದಾಡುತ್ತಿದ್ದ ಸುಧಾತಃಸ್ವಾದೀಯವಾದ ಆ ಗಾನಗಂಗಾಲಹರಿಯು

ಎಲ್ಲ ಪಾಪಗಳನ್ನು ತೊಳೆದು ತೇಲಿಸಿ, ತನ್ನನ್ನು ಪುಣ್ಯಮಯ ನನ್ನಾಗಿ ಮಾಡುತ್ತಿರುವಂತೆ ಎನಿಸಿತು.

ಮಾಧೂರಾಯನು ಹೀಗೆ ಬೇರೊಂದು ದಿವ್ಯಲೋಕದಲ್ಲಿ ಅಲೆ ಯುತ್ತಿರುವಾಗಲೆ ಹಾಡು ಕೊನೆಗಂಡಿತು. ಸವಿಗನಸುಗಳನ್ನು ಕಾಣುತ್ತಿರುವವರ ಕಿವಿಯಲ್ಲಿ ತಣ್ಣೀರು ಎರಚಿ ಹಿಡಿದೆಬ್ಬಿಸಿ ಕುಳ್ಳಿರಿಸಿ ದಂತೆ ಮಾಧೂರಾಯನಿಗೆ ಕಕ್ಕಾವಿಕ್ಕಿಯಾಯಿತು. ಆ ಬೆರಗಿನಿಂದ ಆತನು ಒಮ್ಮೆಲೆ ಮೋರೆದಿರುವಿ ಆ ಹೆಣ್ಣುಮಗಳನ್ನು ನಿಟ್ಟಿಸಿ ನೋಡ ಹತ್ತಿದ. ಆತನ ಹೃದಯದಲ್ಲಿ ಮೈದೋರಿ ಅಡಗಿದ ಪ್ರಕೃತಿದೇವಿಯೆ ತನ್ನ ಆ ಉನ್ನತವಾದ ಧವಲಗಿರಿಯಿಂದಿಳಿದು ಬಂದು ಅಲ್ಲಿ ಕುಳಿತಂತೆ ಎನಿಸಿತು. ಆತ ಮೈಮರೆತು ಅವಳನ್ನು ಕಣ್ಣಿಟ್ಟು ನೋಡುತ್ತಿರು ವಂತೆಯೆ, ಅವಳು ಆ ಗಾಯನಪ್ರವಾಹದಲ್ಲಿ ತೇಲಿಬರುತ್ತಲಿದ್ದ ಒಂದು ಗುಲಾಬಿಯ ಹೂವಿನಂತೆ ಕಂಡಳು. ಅವಳು ಹೆಣ್ಣಾಗಿರದೆ ಒಂದು ಹೂವೇ ಆಗಿದ್ದರೆ, ತಾನು .ಅದನ್ನು ಮೆಲ್ಲನೆ ಎತ್ತಿಕೊಂಡು ಮುದ್ದಿಟ್ಟು ತನ್ನೆದೆಯ ಬದಿಯಲ್ಲಿ ಇರಿಸಿಕೊಳ್ಳಬಹುದಿತ್ತಲ್ಲಾ—ಎನ್ನಿ ಸಿತು. ಇನ್ನೂ ಏನೇನೋ ಎನಿಸಿಯೇ ಎನಿಸಿತು.

ಮಾಧೂರಾಯನು ಈ ಪರಿ ಅವಳನ್ನು ಕಣ್ಣಿಟ್ಟು ನೋಡುತ್ತಿ ರುವಾಗ, ಅವಳೂ ಒಂದು ಬೆಡಗಿನಿಂದ ಆತನನ್ನು ಎವೆಯಿಕ್ಕದೆ ನೋಡುತ್ತಲೇ ಇದ್ದಳು. ಮುಗ್ಧನಾದ ಮಾಧೂರಾಯನು ಅವ ಳಿಂದ ತನ್ನ ಕಣ್ಣು ಕೀಳಲಾರದೆ ಕುಳಿತುಕೊಂಡಿರುವಾಗ, ಅವಳ ತುಟಿಗಳಲ್ಲಿ ಆತನು ನೆನೆಸಿಕೊಂಡಿದ್ದ ಗುಲಾಬಿಯು ಅರಳಿಕೊಂಡಿತು. ಅವಳ ಆ ನಗೆಯು ಮಾಧೂರಾಯನ ಹೃದಯದಲ್ಲೆಲ್ಲ ತನ್ನ ಕಂಪನ್ನು ಇಡುಗಿಸಿಬಿಟ್ಟಿತು.

ಹೀಗೆ ಅವರಿಬ್ಬರೂ ತಮ್ಮತಮ್ಮ ಬೆರಗು – ಬೆಡಗುಗಳಲ್ಲಿ ಮುಳುಗಿ ಕೆಲವೊಂದು ಹೊತ್ತು ಒಬ್ಬರನ್ನೊಬ್ಬರು ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತ ಕುಳಿತರು. ಮಾಧೂರಾಯನಿಗೆ ತನ್ನ ಆಯುಷ್ಯದಾಸಂದವು ತನ್ನೆಡೆಗೇ ಕೈನೀಡಿ ಸಾಗಿಬರುವಂತೆ ತೋರಿತು. ತಾನು ಹಲವು ದಿನದಿಂದ ಹಾತೊರೆದು ಹಾರೈಸಿದ ಹಂಬಲವೊಂದು ಅಂದು ತಾನಾಗಿಯೇ ರೂಪುಗೊಂಡು ಒಡಮೂಡುತ್ತಿರುವಂತೆ ಎನಿಸಿತು.

೪

ಮಾಧೂರಾಯನು ಆದರ್ಶವಾದಿ. ಸಂಸಾರವು ಸಾರವತ್ತಾದುದೆಂದು ಆತನ ಭಾವನೆ. ಅದನ್ನೊಂದು ಕನಸು, ಭ್ರಮೆ, ಮಾಯೆ ಎಂದು ಆತ ಬಗೆಯಲಾರ. ಮಾನವರ ಹೃದಯಗಳು ಹಂಬಲಿಸಿ ಹಾತೊರೆದು ಕೊನೆಗೊಮ್ಮೆ ಕಂಡುಕೊಳ್ಳುವ ಒಂದು ಚಿರನೂತನವಾದ ಅಮಿತವಾದ ಅಮೃತಮಯವಾದ ದಿವ್ಯಾನಂದವೇ ಸಂಸಾರದ ಜೀವಾಳವೆಂದು ಆತನ ಅನಿಸಿಕೆ. ಆ ಆನಂದ ಲೋಕಕ್ಕೆ ಪ್ರೇಮವೇ ಸೋಪಾನ ಮಾರ್ಗವೆಂದು ಆತನ ತಿಳುವಳಿಕೆ. ಆ ಮಾರ್ಗದಲ್ಲಿ ತಂನಂನು ಕೈ ಹಿಡಿದು ಕರೆದುಕೊಂಡು ಹೋಗುವವರೊಬ್ಬರು ಎಂದೋ ಒಂದು ದಿನ ಬರಲಿರುವರೆಂದು ಒಗೆದು ಆತನು ಮೂವತ್ತು ವರ್ಷಗಳಾದರೂ ಉಳಿದವರಂತೆ ಸರ್ವಸಾಮಾನ್ಯ ರೀತಿಯಲ್ಲೇ ಮದುವೆಯಾಗಲೊಲ್ಲದೆ ಆ 'ಯಾರೋ ಒಬ್ಬರ ದಾರಿ ಕಾಯುತ್ತಲಿದ್ದ.

ಆ ಹೆಣ್ಣುಮಗಳನ್ನು ಎವೆಹಳಚದೆ ನೋಡುತ್ತ ಕುಳಿತಾಗ ಮಾಧೂರಾಯನ ಹೃದಯದ ಕೋಡಿಯೊಡೆದು, ಭಾವನಾ ಪ್ರವಾಹವು ಆಳವು ಮೀರಿ ಹರಿಯುತ್ತಿರುವಂತೆ ಎನಿಸಿತು. ತಾನು ಅಷ್ಟು ದಿನದಿಂದ ದಾರಿಕಾಯುತ್ತಲಿರಲು ಆ ತಂನ ಆದರ್ಶಮಾರ್ಗನಿದರ್ಶ–

ಕರು, ಆ ಹೆಂಣುಮಗಳ ರೂಪಿನಲ್ಲಿ ಒಡಮೂಡಿ ಬಂದಂತೆ ಆತನಿಗೆ ತೋರಿತು. ಪ್ರಥಮ ಪ್ರೇಮೋತ್ಸವದ ಭರದಲ್ಲಿ ಮುಂಗೆಟ್ಟ ಆತನ ಹೃದಯವು ಅವಳ ಆತ್ಮತೇಜೋದರ್ಶನಕ್ಕಾಗಿ ತಡವರಿಸಹತ್ತಿತು.

ಹೀಗೆ ಮನಮುಗ್ಧನಾಗಿ ವ್ಯೈಮರೆಯುತ್ತಲಿರುವಾಗಲೆ ಮಾಧೂರಾಯನ ವಿವೇಕವು ಆತನನ್ನು ಕಚ್ಚನೆ ಚುಚ್ಚಲು, ಹೆರವರ ಹೆಂಣಿಗಾಗಿ ತಾನು ಹಾತೊರೆದುದಕ್ಕೆ ಆತನಿಗೆ ಕೆಡಕೆನಿಸಿತು. ಅವಳು ತೋರುತ್ತಲಿದ್ದ ಒಸಪು ಒಯ್ಯಾರಗಳಿಂದಲೂ, ಬೀರುತ್ತಲಿದ್ದ ಮಂದ ಹಾಸದ ಸೊಬಗಿನಿಂದಲೂ, ಆತನು ಹೇಗೋ ಮನಸ್ಸನ್ನು ಹಿಂದಕ್ಕೆ ಳೆದುಕೊಂಡು, ಮತ್ತೆ ಮೊದಲಿನಂತೆ ಕಿಡಕಿಯ ಹೊರಗೆ ಮೋರೆ ಹಾಕಿಕೊಂಡು, ಕುಳಿತನು.

೫

ಅಷ್ಟು ಹೊತ್ತಿಗೆ ಗಾಡಿಯು 'ಮಂಡ್ಯ'ವನ್ನು ದಾಟಿತ್ತು. ಆ ಹೆಂಣುಮಗಳು ಗಾಳಿಯ ಜೋರನ್ನು ತಡೆಯಲಾರದೆಯೋ ಏನೋ ಎಂಬಂತೆ ತಾನು ಕುಳಿತ ಕಿಡಕಿಯ ಕನ್ನಡಿ ಬಾಗಿಲನ್ನು ಮೇಲಕ್ಕೇರಿಸಲು ಯತ್ನಿಸಿ, ಬಹು ಪ್ರಯಾಸಪಟ್ಟರೂ ಕೈಸಾಗದೆ ಕೊನೆಗೆ, 'ಅದನ್ನು ದಯವಿಟ್ಟು ತನಗಾಗಿ ಸರಿಮಾಡಿಕೊಡಬೇಕೆ'ಂದು ಅವಳು ಮಾಧೂರಾಯನನ್ನು ಬಲು ವಿನಯದಿಂದ ಪ್ರಾರ್ಥಿಸಿಕೊಂಡಳು.

ಒಂದು ಬಗೆಯಿಂದ ಮಾಧೂರಾಯನು ಮನಸು ಬಿಗಿ ಹಿಡಿಯಲು ಯತ್ನಿಸುತ್ತಿದ್ದರೂ, ಇನ್ನೊಂದು ಬಗೆಯಿಂದ ಅವಳೊಡನೆ ಮಾತನಾಡಲು ಅನುವು ದೊರೆತರೆ ಸಾಕೆಂದು ಆತ ಎಣಿಕೆ ಹಾಕುತ್ತಿದ್ದ. ಇಂಥ ಹೊತ್ತಿನಲ್ಲಿ ಪ್ರಸಂಗವು ತಾನೇತಾನಾಗಿ ಒದಗಿ ಬಂದುದರಿಂದ ಆತನ ಮನವು ಒಳಗೊಳಗೇ ಹಿಗ್ಗಿಕೊಂಡಿತು. ಆದರೆ ತುಸು

ವಾದರೂ ಸಂಕೋಚವನ್ನು ತೋರದಿರುವದು ಸರಿಯಾದುದಲ್ಲವೆಂದು, ಮೊದಲು ಸ್ವಲ್ಪ ಹಿಂದೆಮುಂದೆ ನೋಡಿದಂತೆ ಮಾಡಿ ಕೊನೆಗೆ ಅವಳ ಪ್ರಾರ್ಥನೆಗೊಡಂಬಟ್ಟು, ಕಿಡಕಿಯ ಬಾಗಿಲನ್ನು ಸರಿಯಾಗಿ ಕೂಡಿ ಸಲು ಎತ್ತುಗಡೆ ಮಾಡತೊಡಗಿದ. ಆದರೆ ಪ್ಯಾಸೆಂಜರ ಗಾಡಿ; ಹಳೇ ಡಬ್ಬಿಗಳು. ಆದುದರಿಂದ ಕಿಡಕಿಯಬಾಗಿಲು ಒಂದೆಲೇ ಸರಿಯಾಗಿ ಕೂಡಲಿಲ್ಲ. ಅಂತೂ ಒಂದೆ ಪ್ರಯಾಸಪಟ್ಟು ಕೂಡಿಸುವದರಲ್ಲಿ ಮಾಧೂರಾಯನ ಬಲಗೈಯ ಕಿರಿಬೆರಳು ಇಲುಕಿಕೊಂಡಿತು. ಮಾಧೂ ರಾಯನು ತಟ್ಟನೆ ಆ ಬೆರಳಂನು ತನ್ನ ಬಾಯಲ್ಲಿಟ್ಟುಕೊಂಡನು. ಅದನ್ನು ನೋಡಿ ಆ ಹೆಂಣುಮಗಳಿಗೆ ಬಲು ವ್ಯಥೆಯಾಯಿತು. ಅವಳು ತಾನಾಗಿಯೇ ಮಾಧೂರಾಯನ ಬೆರಳನ್ನು ತಂನ ಕೈಯಲ್ಲಿ ತೆಗೆದು ಕೊಂಡು, ಸೀರೆಯ ತುದಿಯಿಂದ ಅದನ್ನು ಬಿಗಿಯಾಗಿ ಸುತ್ತಿ ಕಾವು ಕೊಡಹತ್ತಿದಳು. ಅದರಿಂದ ರಕ್ತವು ಮಂಜುಗಟ್ಟದೆ ನೋವು ಕಡಿಮೆ ಎನ್ನಿಸಿತು.

ಮಾಧೂರಾಯನು, ತಾನು ಅವಳಿಂದ ಉಪಕೃತನಾದೆನೆಂದು ಭಾವಿಸಿಕೊಂಡು, ಅವಳ ಕೈಯಲ್ಲಿ ತನ್ನ ಬೆರಳನ್ನಿಟ್ಟು, ಅವಳೆದುರಿನ ಲ್ಲಿಯೆ ಕುಳಿತುಕೊಂಡನು. ಮುಂದಿನ ಸ್ಟೇಶನ್ನಿನಲ್ಲಿ ಆತನು ಇಳಿದು ಹೋಗಿ ತನ್ನ ಕರವಸ್ತ್ರವನ್ನು ತೊಯ್ಸಿಕೊಂಡು ಬರಲು ಅವಳು ಅದ ರಿಂದ ಆತನ ಬೆರಳನ್ನು ಕಟ್ಟಿದಳು.

ಮುಂದೆ, ಗಾಡಿಯು ತಂನ ನಿಟ್ಟನ್ನು ಹಿಡಿದು ಸಾಗಿದಂತೆ ಅವರ ಮಾತುಕಥೆಗಳೂ ಒಂದು ನಿಟ್ಟು ಹಿಡಿದು ಸಾಗಿದವು. ತುಸು ಹೊತ್ತಿನಲ್ಲಿಯೇ ತಮ್ಮಿಬ್ಬರ ಪರಿಚಯವು ದೃಢವಾಗಿ ಬೆಳೆದುಬಿಟ್ಟಿ ತೆಂದು ಮಾಧೂರಾಯನು ಭಾವಿಸಿಕೊಂಡನು. ಅವಳೊಬ್ಬ ಹೆರವರ

ಣೆಣ್ಣಲ್ಲವೆಂಬ ಸಂಪಗೆಯುಂಟಾಗುತಲೇ ತವ್ಮಿಬ್ಬರ ಹೃದಯಗಳೂ ಒಂದುಗೂಡಲು ಹಾತೊರೆಯುತ್ತಿರುವದಾಗಿಯೂ ಆತನಿಗೆ ಎನಿಸಿ ಬಿಟ್ಟಿತು.

೬

ಹೀಗಿರುವಾಗಲೇ ಗಾಡಿಯು 'ಫ್ರೇಂಚರಾಕ್ಸ'ನ್ನು ದಾಟಿತು.

೭

"ಹಾಗಾದರೆ ನೀವು ಶ್ರೀರಂಗಪಟ್ಟಣದಲ್ಲಿಯೇ ಇಳಿಯು ವವರೇ"

"ಹೌದು, ರಂಗು; ಮೊಕದ್ದಮೆಯ ಕೆಲಸವು ತೀರ ಗಡಬಿಡಿ ಯದು. ನಾಳೆಯೇ ಕೊನೆಯ ಮುದ್ದತು. ಆದರೂ ನಾನು ನಿನಗೆ ಮಾತು ಕೊಟ್ಟಂತೆ ಇಂದು ಸಾಯಂಕಾಲ ನಿಂನಂನು ಕಾಣಲು ಮನ ಮುಟ್ಟಿ ಯತ್ನಿಸುವೆನು."

"ಏನೋ ನಾನು ಬೇರೆ ಕಾಣೆ. ಅತ್ತ ಹಣವು ನಿಂಮುನ್ನು ಕಟ್ಟಿ ಎಳೆಯುತ್ತಿರುವಾಗ ನನ್ನ ಬಿನ್ನಹವನ್ನು ನೀವೇತು ಮನ್ನಿಸ ಬಹುದು!"

"ಹಾಗೆನ್ನಬೇಡ. ನಾನು ಖಂಡಿತವಾಗಿ ನಿಂನಂನು ಕಾಣದೆ ಬೆಂಗಳೂರಿಗೆ ಮರಳಲಾರೆ"

ಮಾಧೂರಾಯನು ಮಾತಾಡುತ್ತ ರಂಗಮ್ಮನ ಕೈಯನ್ನು ತನ್ನ ಕೈಯಲ್ಲಿ ಇಟ್ಟುಕೊಂಡು ಮೆಲ್ಲಗೆ ಹಿಸುಕಹತ್ತಿದನು.

"ಹಾಗಾದರೆ, ನಾನು ಇಂದಿನ ದಿಸವೆಲ್ಲ ನಿಮ್ಮ ದಾರಿಯನ್ನೆ ಕಾಯುತ್ತಲಿರುವೆ. ಮರೆಯಲಾಗದು—ಆಂ—"

" ಆಗಲಿ, ನಿಂಸಂಸು ಇನ್ನು ಮೇಲೆ ಮರೆಯುವೆನೇ–ಹಾಗಾಗುವದಾದರೆ ನನ್ನ ಉಸುರೇ ಆಡಲಿಕ್ಕಿಲ್ಲ. "

ರಂಗಮ್ಮನು ಕಣ್ಣು ಕುಣಿಸಿ, ಕೊರಳು ಮಣಿಸಿ, ಕೈಚಾಚಿ ಮಾಧೂರಾಯನನ್ನು ತನ್ನೆಡೆಗೆ ಬಲವಾಗಿ ಎಳೆದುಕೊಂಡಳು. ಅವರಿಬ್ಬರ ಎದೆಗಳು ಒಂದುಗೂಡುತ್ತಿರುವಾಗಲೇ, ಮಾಧೂರಾಯನು, ಅವಳ ಕೆನ್ನೆಗೊಂದು ಮೆತ್ತನ್ನ ಮುತ್ತು ಕೊಟ್ಟ. ಒಡನೆ ಅವಳು, ಹುಬ್ಬುಹಾರಿಸಿ, ಕಣ್ಣು ಹರಿಸಿ, ಮುಗುಳು ನಗೆಯೊಂದು ತೇಲಿಸಿ, ಮೆಲ್ಲನೆ ತನ್ನ ತುಟಿಗಳನ್ನು ಮುಂದೆ ಚಾಚಿದಳು. ಮಾಧೂರಾಯನಿಗೆ ಮತ್ತೊಂದು ಪ್ರಸಾದವು ದೊರೆಯಿತು.— ಆ ವರೆಗೆ ಆ ಕಂಪಾರ್ಟಮೆಂಟಿನಲ್ಲಿ ಮತ್ತಾರೂ ಬರದಿದ್ದುದಕ್ಕೆ ಆತನು ' ಶ್ರೀ ರಂಗನಾಥ ' ನಿಗೆ ಎಷ್ಟೋ ವಂದನೆಗಳನ್ನರ್ಪಿಸಿದ.

ಗಾಡಿಯು ಶ್ರೀರಂಗಪಟ್ಟಣವನ್ನು ಸೇರತೊಡಗಿತು. ಮಾಧೂರಾಯನು ಗಡಬಡಿಸಿ ಇಳಿಯುವ ಎತ್ತುಗಡೆ ಮಾಡತೊಡಗಿದ. ಆಗ ರಂಗಮ್ಮನ ಮೋರೆ ಸಣ್ಣದಾಗಿ ಇಳಿಬಿದ್ದಂತೆ ತೋರಲು ಮಾಧೂರಾಯನಿಗೆ ಇಲ್ಲದ ಕಸಿವಿಸಿಯಾಗತೊಡಗಿತು. ಆದರೂ ತನಗಾಗಿ ಸ್ಟೇಶನದಲ್ಲಿ ದಾರಿ ಕಾಯುತ್ತಿರುವ ಪಕ್ಷಕಾರರು ತನ್ನನ್ನು ಹುಡುಕಿಕೊಂಡು ಬರುವಷ್ಟರಲ್ಲಿಯೇ ಅಲ್ಲಿಂದ ಹೊರಟು ಹೋಗಬೇಕಾಗಿತ್ತು. ಉಪಾಯವಿಲ್ಲದೇ, ನಿರೋಪ ತೆಗೆದುಕೊಳ್ಳುತ್ತ, ಮಾಧೂರಾಯನು ಮತ್ತೊಮ್ಮೆ ಕಳವಳಿಸಿಂದ ಅವಳ ಮೈದಡವಿ, ಕುರುಳು ತೀಡಿ, ಅವಳು ಗಟ್ಟಿಯಾಗಿ ಹಿಡಿದುಕೊಂಡ ಕೈಯನ್ನು ಬಿಡಿಸಿಕೊಳ್ಳಲಾರದೆ ಬಿಡಿಸಿಕೊಂಡು, ಹೇಗೋ ಅಲ್ಲಿಂದ ಹೊರಟು, ತನಗಾಗಿ ಕಾಯ್ದುಕೊಂಡಿದ್ದ ಪಕ್ಷಕಾರರನ್ನು ಕೂಡಿಕೊಂಡನು. ಆ ಮೇಲೆ ಬೆಳಗಿನ

ನಸುಗತ್ತಲೆಯಲ್ಲಿ ಆ ಕಂಪಾರ್ಟ್‌ಮೆಂಟಿನ ಕಡೆಗೇ ಕಣ್ಣಿಟ್ಟು ನೋಡು
ತ್ತಿದ್ದು ಗಾಡಿ ಹೊರಟುಹೋದಮೇಲೆ, ತನ್ನ ಭಾವನೆಗಳ ಭಾರದ
ಕೆಳಗೆ ತಾನು ಕುಸಿಬೀಳುತ್ತಿರುವನೇನೋ ಎಂದು ಎನಿಸುತ್ತಿರುವಾಗ
ಮುಂಗಾಣದೆ ಆತ ತನ್ನ ಕೆಲಸಕ್ಕಾಗಿ ಸಾಗಿದ.

ಇತ್ತ ರಂಗಮ್ಮನು ಕಣ್ಮರೆಯಾಗುವವರೆಗೂ ಮಾಧೂರಾಯ
ನನ್ನೇ ನೋಡುತ್ತಿದ್ದು, ಆ ಮೇಲೆ ಆತನು ಕೊಟ್ಟ ಗುರುತಿನುಂ
ಗುರವನ್ನು ನೋಡಿಕೊಂಡು ಸಂತೋಷದ ಅಟ್ಟಹಾಸದಿಂದ ಒಂದು
ಒರುನಗೆಯ ತೆರೆಯನ್ನು ತೇಲಿಸಿಬಿಟ್ಟು, ಉಂಗುರವನ್ನು ಬೆರಳಿನಿಂದ
ತೆಗೆದು ತನ್ನ ಪೆಟ್ಟಿಗೆಯಲ್ಲಿ ಭದ್ರವಾಗಿ ಮುಚ್ಚಿಟ್ಟು, ನಿಶ್ಚಿಂತಳಂತೆ
ಬೆಳಗಿನ ತಂಗಾಳಿಗೆ ಮೈಯೊಡ್ಡಿ ಹಾಯಾಗಿ ಒರಗಿಕೊಂಡಳು.

ಅಂದಿನ ದಿನವೆಲ್ಲ, ಮಾಧೂರಾಯನಿಗೆ ಸಮಾಧಾನವಿಲ್ಲ. ತನ್ನ
ಜೀವವನ್ನು ತಾನೆಲ್ಲಿಯೋ ಕಳೆದುಕೊಂಡು ಒಂದಂತೆ ಆತನಿಗೆ
ತೋಚಹತ್ತಿತು. ಆದರೂ, 'ತಾನು ಕೊನೆಗೊಮ್ಮೆ ತನ್ನ ಆದರ್ಶ
ದೃಷ್ಟಿಗೆ ತಕ್ಕಂಥ ಹೆಣ್ಣೊಂದರ ಪ್ರೀತಿಯನ್ನು ಗೆದ್ದುಕೊಂಡೆನಲ್ಲ'
ಎಂಬ ಅನಿಸಿಕೆಯ ಆನಂದವು ಆತನ ಅಂದಿನ ಅಸಮಾಧಾನದಲ್ಲಿಯೂ
ಒಂದು ಒಗೆಯ ಶಾಂತತೆಯನ್ನುಂಟುಮಾಡುತ್ತಿತ್ತು.

ಮಾಧೂರಾಯನು ಶಾಸ್ತ್ರದ ಪೂರ್ತೆ ಲಗುಬಗೆಯಿಂದ ಪಕ್ಷ
ಕಾರರ ಕೆಲಸವನ್ನು ಹೇಗೋ ತೀರಿಸಿಕೊಂಡು ಸಂಜೆಯ ಎಕ್ಸ್‌ಪ್ರೆಸ್ಸಿ
ನಿಂದ ಮೈಸೂರಿಗೆ ಹೊರಟೇಬಿಟ್ಟ.

೮

ರಂಗಮ್ಮನು, ಆತನನ್ನು ಎದುರುಗೊಂಡು, ಮೇಲಟ್ಟದ
ಏಕಾಂತ ವಿಹಾರಕ್ಕೆ ಕರೆದುಕೊಂಡುಹೋಗಿ ಹಲವು ಪರಿಯಾಗಿ

ಉಪಚರಿಸಿದಳು. ಅವಳ ಉಪಚಾರಕ್ಕೂ, ಪ್ರೇಮಲವಾದ ನಯ ವಿನಯಕ್ಕೂ, ಕೋಮಲ ಕಂಠದ ಮೃದುಮಧುರವಾದ ನುಡಿಗಳಿಗೂ ಮಾಧೂರಾಯನ ಎದೆಯು ಎಳೆದುಹೋಯಿತು. ಒಳ್ಳೇ ಕಲಿತವಳಾದುದರಿಂದಲೂ, ಸುಧಾರಕಳಾದುದರಿಂದಲೂ ಅವಳಲ್ಲಿ ಸಹಜವಾಗಿ ಕಂಡುಬರುವ ಸ್ವಾತಂತ್ರ್ಯವೃತ್ತಿಗೆ ಆತನ ಮನವು ಸೆಳೆದು ಹೋಯಿತು. ಹೀಗೆ ಅಂಥವಳ ಪ್ರೇಮವನ್ನು ಗೆದ್ದುಕೊಂಡುದರಲ್ಲಿಯೇ ತನ್ನ ಜೀವನಸಾಫಲ್ಯವೆಂದು ಮಾಧೂರಾಯನು ಬಗೆದುಕೊಂಡು, ಆವಳು ತನ್ನ ಗೃಹಲಕ್ಷ್ಮಿಯಾದ ಮೇಲೆ ತನ್ನ ಜೀವಿತವು ಸೌಂದರ್ಯಲಕ್ಷ್ಮಿಯದೊಂದು ಆನಂದನಿಕೇತನವಾಗಬಹುದಲ್ಲ ಎಂಬ ಸವಿಗನಸಿನ ತೆರೆಗಳ ಮೇಲೆ ತೇಲಿತೇಲಿ ಒಲಾಡುತ್ತಲಿದ್ದ.

ಆದರೆ ಆತನು ಬಹಳ ಹೊತ್ತು ಆ ಸುಖದಲ್ಲಿರುವದಕ್ಕೆ ಅನುವಿರಲಿಲ್ಲ. ಏಕೆಂದರೆ ಮೊಕದ್ದಮೆಯ ಒತ್ತಾಯಕ್ಕಾಗಿ ಆತನು ಅಂದಿರುಳು ಹತ್ತು ಗಂಟೆಯ ಪ್ಯಾಸೆಂಜರದಿಂದ ಹಿಂದಿರುಗಿ ಬೆಂಗಳೂರಿಗೆ ಹೋಗದೆ ಗತ್ಯಂತರವಿರಲಿಲ್ಲ. ಕಾರಣ, ಉಪಾಯವಿಲ್ಲದೆ ಆತನು ಅಲ್ಲಿಗೆ ಬಂದ ಒಂದು ಒಂದೂವರೆ ಗಂಟೆಯಲ್ಲಿಯೇ ಹೊರಡಬೇಕಾಯಿತು. 'ತಾನಿನ್ನೂ ಹೊಸ ವಕೀಲ; ತನ್ನ ಪ್ರತಿಷ್ಠೆಯುಂಟಾಗಬೇಕಿದ್ದರೆ ತಾನು ಸಲ್ಲದ ಮೋಹಗಳನ್ನು ಹಚ್ಚಿಕೊಳ್ಳದೆ ಏನಿದ್ದರೂ ತನ್ನ ಕಾರ್ಯದಲ್ಲಿ ಕೈಮೀರಿ ಹೆಣಗಲೇಬೇಕು!' ಎಂಬ ಕರ್ತವ್ಯಬುದ್ಧಿಯು ಅತ್ತ ಎಳೆಯುತ್ತಿದ್ದಿತು. ಅದಕ್ಕಿಮ್ಮಡಿಯಾಗಿ 'ಅಯ್ಯೋ! ಮನುಷ್ಯನು ಹಣಕ್ಕಾಗಿ, ತನ್ನ ಹೃದಯದ ಹಂಬಲಗಳನ್ನು ಸಹ ಹಿಂದಟ್ಟಬೇಕಾಗುವದಲ್ಲಾ! ಏನಿದು ಹಾಳು ಬಾಳುವೆ!' ಎಂದು ಮನಸ್ಸು ಇತ್ತ ಎಳೆಯುತ್ತಿದ್ದಿತು. ಎರಡರ ಎಳೆತವನ್ನೂ ತಡೆದು

ಸಿಲ್ಲಿಸುವ ಸ್ವ್ಯಾಂಡೋಸ ಶಕ್ತಿ ಆತನಲ್ಲಿರಲಿಲ್ಲ. ಆದುದರಿಂದ, ಜಗತ್ತನ್ನೂ, ತನ್ನ ಹೊಣೆಯ ಕಾರ್ಯಗಳೆಲ್ಲವನ್ನೂ ಮನಃಪೂರ್ವಕವಾಗಿ ಮರೆತುಬಿಟ್ಟು, ರಂಗಮ್ಮನ ಬಳಿಯಲ್ಲೇ ಉಳಿಯಲು ಬಂದರೆ ಅಷ್ಟು ಚೆನ್ನಾಗಿದ್ದೀತಲ್ಲ; ಎಂದು ಆತನಿಗೆ ಒಮ್ಮೆಒಮ್ಮೆ ತೋರಿತು.

ಆದರೆ, ವಿವೇಕದ ಅಂಕುಶದೇಟು ಆತನ ಮೈಮರೆಯನ್ನು ಹೊಡೆದೋಡಿಸಿದ್ದರಿಂದ, ಹೊಸ ಗುರುತಿನವಳಾದ ಒಬ್ಬ ಸಭ್ಯ ಸ್ತ್ರೀಯ ವಿಷಯವಾಗಿ, ಆವಳು ತನ್ನ ಪ್ರಣಯಿನಿಯಾಗಬಹುದಾದರೂ—ತಾನು ಹಾಗೆ ವಿಚಾರ ಮಾಡುವದು ತನ್ನ ಕುಲೀನತೆಗೆ ಒಪ್ಪದ ಮಾತಾಗಿ ತೋರಲು, ಅವಳ ಸಂಬಂಧಿಕರು ಏನೆಂದುಕೊಂಡಾರು ಎಂಬ ಭಯದಿಂದ ಮಾಧೂರಾಯನು, ಗಾಡಿಯ ಹೊತ್ತಿಗೆ ಸರಿಯಾಗಿ ಹೊರಟುಬಿಟ್ಟ. ಆದರೂ ಜುಕ್ಕು ಜುಲುಮೆಯಿಂದ ಕಿತ್ತಿದ ಬಳ್ಳಿಯ ಬೇರು ನೆಲದಲ್ಲಿಯೇ ಹರಿದುಳಿಯುವಂತೆ ಆತನ ಎದೆಯ ಬೇರುಗಳು ರಂಗಮ್ಮನಲ್ಲಿಯೇ ಉಳಿದುಕೊಂಡವು.

೯

ಆ ಮಾತಿಗೆ ಒಂದು ತಿಂಗಳಾಯಿತು. ಬೆಂಗಳೂರಿಗೆ ಬಂದ ಮೇಲೆ, ನೌಕರ್‍ದಮೆಯ ಕೆಲಸ ಕೈ ಬಿಡಲೆ ಇಲ್ಲ. ನಡುವೆ ಒಮ್ಮೆ ಯಾವರೂ ಮೈಸೂರವರೆಗೆ ಹೋಗಿ ಬರಬೇಕೆಂದು ಅದೆಷ್ಟೋ ಹವಣಿಸಿದ. ಆಗಿರಲೇ ಇಲ್ಲ. ಆದರೂ ಅವಳಿಂದ ಎರಡು ಮೂರು ಪತ್ರಗಳು ಬಂದಿದ್ದರಿಂದ, ಆತನಿಗೆ ಉಸಿರಾಡುತ್ತಿದ್ದಿತೆನ್ನಬೇಕು! ಪ್ರತ್ಯಕ್ಷ ಸಂತೋಷವಾವುದೂ ಇಲ್ಲದ್ದರಿಂದ, ಅವಳೊಡನೆ ಪತ್ರವ್ಯವಹಾರ ನಡೆಸುವದರಲ್ಲಿಯೆ ಆತ ಹೇಗೋ ಸಂತೋಷವನ್ನು ತಂದುಕೊಳ್ಳುತ್ತಿದ್ದ. ಅಲ್ಲದೆ, ತಾವಿಬ್ಬರೂ ಇರುವ ಆಗಿನ ಅವಸ್ಥೆಯಲ್ಲಿ ಸ್ವಲ್ಪ ಮಟ್ಟಿನ

ಅಗಲಿಕೆಯೂ, ಅದರಿಂದುಂಟಾಗುವ ಆವೇಗವೂ, ಆ ಆವೇಗದ ಪರೀವಾಹ ರೂಪದಲ್ಲಿ ತಾವಿಬ್ಬರು ಪತ್ರಗಳನ್ನು ಬರೆಯುತ್ತಿರುವದೂ ಅವಶ್ಯವಾದುವೆ ಎಂದು ಆತ ಸಮಾಧಾನ ಹಚ್ಚಿಕೊಂಡಿದ್ದ. ಹೀಗೆ ಮಾಡುವದರಿಂದ ತಾವು ಒಬ್ಬರನ್ನೊಬ್ಬರು ತಿಳಿದುಕೊಳ್ಳುವದಕ್ಕೂ ತಮ್ಮಿಬ್ಬರ ಹೃದಯಗಳನ್ನು ಬೆರಿಸಿಕೊಳ್ಳುವದಕ್ಕೂ ಅವಕಾಶ ವುಂಟಾಗುವದೆಂದು ಆತನ ಬಗೆ.

ಮಾಧೂರಾಯನು ತಾನು ಹಿಡಿದ ಮೊಕದ್ದಮೆಯ ಕೆಲಸದಲ್ಲಿ ಸಂಪೂರ್ಣ ಯಶಸ್ವಿಯಾದ. ಅಷ್ಟು ದೊಡ್ಡ ಮೊಕದ್ದಮೆಯನ್ನು ಗೆದ್ದು ಕೊಟ್ಟೆನಲ್ಲಾ ಎಂದು ಆತನಿಗೆ ಮೈ ತುಂಬಿತುಂಬಿ ಉತ್ಸಾಹವು ಉಕ್ಕಿ ಬರುತ್ತಲಿದ್ದಿತು. ಹೊಸ ವಕೀಲರಿಗೆಲ್ಲಾ ಇದು ಸಾಹಜಿಕವಾದ ಸ್ವಾಭಾವಿಕವಾದ ಮಾತಾದರೂ, ಮಾಧೂರಾಯನಂತಹ ಹೆಮ್ಮೆಯನ್ನು ಇನ್ನಾವ ವಕೀಲನೂ ಪಡೆದಿರಲಾರ. ಏಕೆಂದರೆ ಮಾಧೂರಾಯನು ಒಂದೇ ಕಲ್ಲಿಗೆ ಎರಡು ಹಣ್ಣು ಕೆಡವಿದ್ದನು. ತನ್ನ ಹೃದಯದ ಬಲವಿನಿಂದ ರಂಗಮ್ಮನಂಥ ಮೇಲ್ತರಗತಿಯ ಹೆಣ್ಣನ್ನು ಗೆದ್ದುಕೊಂಡ ಹೆಮ್ಮೆಯೊಂದು ಕಡೆ, ತನ್ನ ಬುದ್ಧಿಯ ಬಲದಿಂದ ಹೊಸಬರಿಗೆ ಅಸಾಧ್ಯವಾದ ಮೊಕದ್ದಮೆಯೊಂದನ್ನು ಗೆದ್ದುಕೊಂಡದ್ದಕ್ಕಾಗಿ ರಂಗಮ್ಮನು ತನ್ನನ್ನು ಇನ್ನು ಮೆಚ್ಚಬಹುದಲ್ಲಾ ಎಂಬ ಹೆಮ್ಮೆ ಇನ್ನೊಂದು ಕಡೆಯಾಗಿ ಆತನ ತಕ್ಕಡಿಯನ್ನು ಸರಿಭಾರದಿಂದ ಹೊಯ್ದಾಡಿಸುತ್ತಿದ್ದವು.

ಮಾಧೂರಾಯನ ಕೈ ತೆರವಾಯಿತು. ಇಷ್ಟು ದಿನ ಬಲು ಶ್ರಮ ಪಟ್ಟಿದ್ದರಿಂದ, ಕೆಲವೊಂದು ದಿನ ಬುದ್ಧಿಗೆ ರಜೆ ಕೊಟ್ಟು ಮೈಸೂರಿಗೆ ಹೋಗಿ ಬರುವದೆಂದು ಗೊತ್ತು ಮಾಡಿಕೊಂಡ. ಆದರೆ ಮುಂದಿನ

ಮಂಗಳವಾರವೇ, ಪೆನ್‌ಶನ್ ಮೇಲೆ ಹೋಗಲಿರುವ ತಮ್ಮ ಜಡ್ಜಿಯವರಿಗಾಗಿ ಒಂದು ಸಂತೋಷಕೂಟವು ನಡೆಯಲಿದ್ದುದರಿಂದ ಉಪಾಯವಿಲ್ಲದೆ ಮಾಧೂರಾಯನು ಮೂರು ದಿನ ದಾರೀ ಕಾಯಬೇಕಾಯಿತು. ಏಕೆಂದರೆ ಜಡ್ಜಿಯವರಿಗಾಗಿರುವ ಸಂತೋಷಕೂಟಗಳೆಂದರೆ ವಕೀಲರಿಗೆ ಒಂದು ಹುರುಪಿನ ಮಾತು. ಅದರಲ್ಲೂ ಹೊಸಬರಿಗೆ–ಅದರಲ್ಲಿಯೂ ಮಾಧೂರಾಯನಂಥ ಉತ್ತರೋತ್ತರ ಯಶಸ್ವಿಗಳಿಗೆ ಆ ಮಾತು ಒಂದು ವಿಶೇಷ ಹೆಮ್ಮೆಯದೇ ಎನ್ನಬೇಕು. ಆದ್ದರಿಂದ ಮಾಧೂರಾಯನಿಗೆ ಸೆರೆಹಿಡಿದು ಹಾಕಿದಂತಾಗಿತ್ತು. ಸಂತೋಷಕೂಟವನ್ನು ತೀರಿಸಿಕೊಂಡು ಅಂದಿನ ರಾತ್ರಿಯೇ ಮೈಸೂರಿಗೆ ಹೊರಡಬೇಕೆಂದು ಆತ ನಿಶ್ಚಯಿಸಿಕೊಂಡಿದ್ದ.

೧೦

ಜಡ್ಜಿಗಳಿಗಾಗಿ ನಡೆಯಬೇಕಾದ ಸಂತೋಷಕೂಟದ ವೇಳೆಗೆ, ಬೈಠಕಿಗಾಗಿ ಬಬ್ಬ ಒಳ್ಳೇ ಪ್ರಸಿದ್ಧ ಗಾಯಕಿಯನ್ನು ಕರೆಸುವದಾಗಿ ಗೊತ್ತಾಗಿತ್ತು. ರಂಗನಾಯಿಕೆಯು ದೇಶಕ್ಕೆಲ್ಲ ಹೆಸರಾದ ಗಾಯಿಕೆಯು. ಆದ್ದರಿಂದ ಔತಣವು ಅವಳಿಗೇ ಹೋಯಿತು.

ರಂಗನಾಯಿಕೆಯ ಹೆಸರನ್ನೂ ಅವಳ ಹೊಗಳಿಕೆಯನ್ನೂ ಮಾಧೂರಾಯನು ಕೇಳಿಬಲ್ಲ; ಅವಳನ್ನೂ ನೋಡಿರಲೂ ಇಲ್ಲ, ಅವಳ ಹಾಡನ್ನೂ ಕೇಳರಲೂ ಇಲ್ಲ. ತನ್ನಂಥ ಆದರ್ಶವಾದಿಗೆ ಸಾಹಿತ್ಯ ಸಂಗೀತದಲ್ಲೂ ಅಭಿರುಚಿಯಿರಲೇಬೇಕೆಂಬ ಆಸೆಯಿಂದ ಆತ ಸಾಹಿತ್ಯ ಕೂಟಗಳಿಗೂ ಸಂಗೀತನಾಟಕಗಳಿಗೂ ತಪ್ಪದೆ ಹೋಗುತ್ತಲಿದ್ದ. ಆದುದರಿಂದ ಇಂದು ಮಾಧೂರಾಯನಿಗೆ, ರಂಗಮ್ಮನ ಕಡೆಯ

ಎಳೆತ ಸೆಳೆತವಿದ್ದರೂ, ಈ ರಂಗನಾಯಿಕೆಯಲ್ಲಿಯೂ ತುಸು ಆಸ್ಥೆ ಯುಂಟಾಗಿದ್ದಿತು.

ರಂಗನಾಯಿಕೆಯ ಸಂಗೀತವು ಬಹಳ ದಿನದ ಮೇಲೆ ಆ ಊರಲ್ಲಿ ನಡೆದುದರಿಂದ ಅಂದು ವಿಪರೀತ ಗದ್ದಲ. ಎಲ್ಲೆಲ್ಲಿಯ ಜನರೆಲ್ಲ ಸೇರಿ ಬಿಟ್ಟಿದ್ದರು. ಮಾಧೂರಾಯನೂ ಹೊತ್ತಿಗೆ ಸರಿಯಾಗಿ ತನ್ನ ಬೆಡಗಿ ನೊಂದಿಗೆ ಹೋಗಿ ಉಚಿತ ಸ್ಥಳದಲ್ಲಿ ತನ್ನ ಮಿತ್ರರಾದ ವಕೀಲರ ಬಳಗದೊಂದಿಗೆ ಕುಳಿತಿದ್ದನು. ಗಾಯಕಿಯು ಇನ್ನೂ ಬಂದಿರಲಿಲ್ಲ. ಕಾರಣ ಎಲ್ಲರೂ ದಾರಿ ಕಾಯುತ್ತಿದ್ದರು.

ಈ ಅವಕಾಶದಲ್ಲಿ ಮಾಧೂರಾಯನ ಮನಸ್ಸು ತನ್ನ ರಂಗಮ್ಮ ನೆಡೆಗೆ ಓಡಿ ಹೋಗಿತ್ತು. ಅಂಥ ಗಲಾಟೆಯಲ್ಲಿಯೂ ಕೂಡ, ಆತನು ಸಹಜವಾಗಿ ಅವಳ ನೆನಪಿನ ಉನ್ಮಾದದಿಂದುಂಟಾದ ಪ್ರೇಮ ಸಮಾಧಿಯಲ್ಲಿ ಮುಳುಗಿ, ಬಲದ ಅಂಗೈಯ ಆಸರದಲ್ಲಿದ್ದ ಎಡ ಗೈಯ ಬೆರಳುಗಳ ಮೇಲೆ ಮೂಗಿನ ದೇಟನ್ನು ಆನಿಸಿ, ಕೀಳ್ಮೊಗವಾಗಿ ಕುಳಿತುಕೊಂಡಿದ್ದ. ಆ ಸಮಾಧಿಯಲ್ಲಿ ಮುಳುಗಿದ ಆತನಿಗೆ, ಕಾಲಪುರುಷನ ಕೈಜಾಲವು ತನ್ನನ್ನು ಸೆರೆಗೊಳಿಸುತ್ತಿರುವದೆಂಬುದರ ಅರಿವು ಇರಲಿಲ್ಲ. ಹೀಗೆ ಆತ ಎಷ್ಟೋ ಹೊತ್ತು ಕುಳಿತಿದ್ದನು.

ಹೀಗಿರುತ್ತಿರುವಾಗಲೆ ವಾದ್ಯಗಳ ವಿಜೃಂಭಣೆಯೊಂದಿಗೆ ಸಂಗೀ ತವು ಆರಂಭವಾಯಿತು. ಆ ಸಂಗೀತದ ಮಾಧುರ್ಯವು ಮಾಧೂ ರಾಯನ ಕಿವಿಗಳಲ್ಲಿ ಆತನ ಚೈತನ್ಯವನ್ನು ಚಲಮಲಿಸಲು, ಮಾಧೂ ರಾಯನಿಗೆ ತಾನೊಂದು ಸಂಗೀತಕಚೇರಿಯಲ್ಲಿ ಕುಳಿತಿರುವೆನೆಂಬು ದರ ಅರಿವು ಬಂದು ಆತ ಕಣ್ಣುಬಿಟ್ಟು ಬೆರಗಿನ ನೋಟದಿಂದ ಸುತ್ತಲೂ ನೋಡಿದ. ಆ ಗಾಯನಮಂದಿರದಲ್ಲಿ ಕಿಕ್ಕಿರಿದು ನೆರೆದ

ಜನವೆಲ್ಲ ಕಲ್ಲುಗೊಂಬೆಗಳಾಗಿ ನಿಂತಿದ್ದಾರೆ; ಗಾಯಕಿಯು ತನ್ನ ಕೊರಳ ಬೆರಗಿನಿಂದ ವಿಶ್ವಮೋಹಿನಿಯಂತೆ ಜಡಜೀವಿಗಳನ್ನೆಲ್ಲ ಬೆಪ್ಪು ಗೊಳಿಸುತ್ತ ಸಂಗೀತಸಾಗರದಲ್ಲಿ ಜಿನ್ನಾಟವಾಡುತ್ತಲಿದ್ದಾಳೆ. ಆಗ ಮಾಧೂರಾಯನು ಮೈಮರೆವಿನಿಂದ ಎಚ್ಚತ್ತು ಕಣ್ಣು ಬಿಟ್ಟು ಗಾಯಕಿಯನ್ನೇ ದಿಟ್ಟಿಸುತ್ತಿರಲು, ಆತನ ಮೈಯೆಂತ ಮೈಯೆಲ್ಲ ಜುಮ್ಮು ಗಟ್ಟಿಸುತ್ತ ಹೊಂಪುಳಿಯ ಹೊಳೆಯೊಂದು ಹರಿದಾಡಿತು. ಒಂದು ಬಗೆಯ ಮೈಮರೆವಿನಿಂದ ಪಾರಾಗಿ, ಹಾಗೆ ಆ ಗಾಯಕಿ ಯನ್ನು ನೋಡುತ್ತಿರುವಾಗ ಆತನ ಕಣ್ಣುಗಳನ್ನು ಇನ್ನೊಂದು ಬಗೆಯ ಅರೆಮರೆವು ಮಂಜುಗೂಡಿಸತೊಡಗಿದವು. ಆ ಮಂಜಿನ ಮುಸುಕಿನೊಳಗಿಂದ ತನ್ನ ನೋಟವನ್ನು ನಾಟಿಸಿ ಮಾಧೂರಾಯನು ಮತ್ತೂ ಏಕ ದೃಷ್ಟಿಯಿಂದ ನೋಡಹತ್ತಿದ. ಅದೇ ವೇಳೆಗೆ, ಎಲ್ಲರ ಮನಸ್ಸುಗಳನ್ನು ತನ್ನ ಹಾವಭಾವದಿಂದ ಮರುಳುಗೊಳಿಸುತ್ತಿದ್ದ ಗಾಯಕಿಯ ಕಣ್ಣುಗಳು, ಮಾಧೂರಾಯನ ಕಣ್ಣುಗಳನ್ನೂ ಸೆರೆ ಗೊಳಿಸಿದವು. ನೋಡುನೋಡುತ್ತಿರುವಂತೆಯೇ ಅವಳ ಆಲಾಪ ಗಳೊಡನೆ ಮೆತ್ತನ್ನ ಮುಗುಳುನಗೆಯೊಂದು ಅರಳಿ ಒಂದು ಮಾಧೂ ರಾಯನ ಕಣ್ಣನೋಟವನ್ನು ಎದುರುಗೊಂಡಿತು. ಆತನ ಎದೆಯಲ್ಲಿ ಎಂದೂ ಬಾರದ ಉದ್ವೇಗವೊಂದು ಏಳಲಾಗಿ, ಮನಸ್ಸು ಚಂಚಲ ವಾಯಿತು. ಹೃದಯವು ವಿಕಲವಾಯಿತು. ಗಾಯಕಿಯ ಕಣ್ಣು ನೋಟದ ಮಾಟದಿಂದ ಆತನ ಅವಯವಗಳೆಲ್ಲ ನಿಶ್ಚೇತನವಾಗಲು, ಅವುಗಳ ವ್ಯಾಪಾರವೆಲ್ಲ ಕೊನೆಗಂಡಂತೆ ಭಾಸವಾಯಿತು. ಅವಳಲ್ಲಿ ನೆಟ್ಟ ಆತನ ಕಣ್ಣು ಕದಲದಾಯಿತು. ಹೀಗೆಯೇ ಅದೆಷ್ಟೋ ಕಾಲ ಕಳೆಯಿತು. ಬಹಳ ಹೊತ್ತಿನ ಮೇಲೆ ಮಾಧೂರಾಯನು ಮೆಲ್ಲಮೆಲ್ಲನೆ ತನ್ನನ್ನಾವರಿಸಿದ ಸಂಮ್ಮೋಹನದಿಂದ ಎಚ್ಚರಿಯು

ತ್ತಿರುವಾಗಲೇ ಸಂಗೀತವು ಕೊನೆಗಂಡಿತು. ಗಾಯನಮಂದಿರದಲ್ಲೆಲ್ಲ ಗಲಭೆಯು ಮತ್ತೆ ಮೊದಲಿನಂತೆ ಎದ್ದು ಕುಣಿಯಹತ್ತಿತು. ಸಂಗೀತ ಕಚೇರಿಯ ಕಾರ್ಯಕರ್ತರು ಮುಂದರಿದು ಗಾಯಕಿಯ ಯೋಗಕ್ಷೇಮಕ್ಕಾಗಿ ಹಾತೊರೆಯುತ್ತಲಿದ್ದರು. ಅದನ್ನೆಲ್ಲ ಮನ ದಂದು ಮಾಧೂರಾಯನು ಚೇತರಿಸಿಕೊಂಡು ಹೊರಕ್ಕೋಡುವ ದಾರಿಯನ್ನು ನೋಡುತ್ತಿರುವಾಗಲೆ, ಗಾಯಕಿಯು ತಾನೇ ಮುಂ ದರಿದು ಬಂದು ಮಾಧೂರಾಯನನ್ನು ಇಂಗ್ಲೀಷದಲ್ಲಿಯೇ ಮಾತ ನಾಡಿಸಿದಳು.

" ಏನು ! ಇವತ್ತಿನ ಸಂಗೀತದ ಬಗ್ಗೆ ನಿಮ್ಮ ಅಭಿಪ್ರಾಯ ವೇನು? ನೀವು ಒಳ್ಳೇ ಸಂಗೀತಜೀವಿಗಳೆಂದು ನನ್ನ ನಂಬಿಕೆಯಿರು ವದರಿಂದ ನನಗೆ ನಿಮ್ಮ ಅಭಿಪ್ರಾಯ ಮುಂಚೆ ಬೇಕಾಗಿದೆ. " ಮಾತ ನಾಡುತಾಡುತ್ತ ಗಾಯಕಿಯು ಅರೆನಗೆಯ ತೆರೆಗಳನ್ನುರುಳಿಸಿದಳು.

ಆ ವೇಳೆಯಲ್ಲಿ ಅಷ್ಟು ಜನರಲ್ಲಿ ಅವಳು ಮಾತನಾಡಿಸಿದ್ದರಿಂದ ಮಾಧೂರಾಯನಿಗೆ ನಾಚಿಕೆಯು ಸುತ್ತಿಮುತ್ತಿ ಸಾವಿರ ಮೊನೆ ಯಾಗಿ ಚುಚ್ಚುತ್ತಿರುವಂತೆನಿಸಿತು. ಅದರಿಂದ ಮೊದಲೇ ಅರಜೀವ ವಾಗಿದ್ದ ಆತನ ಅವಯವಗಳು ಕುಂದಿ ಕುಸಿಬೀಳುತ್ತಿರುವಂತೆ ಭಾಸ ವಾಯಿತು. ಆದರೂ ಸೌಜನ್ಯಕ್ಕೆಂದು ಮರುಮಾತನಾಡಿದ– " ಬಹಳ ಚೆನ್ನಾಗಿತ್ತು ; ನನಗೆ ರಂಗನಾಯಕಿಯೆಂದರೆ ನೀವೇ ಎಂದು ಈ ಮೊದಲು ಗೊತ್ತಿರಲಿಲ್ಲ. " " ನಾನು ರಂಗನಾಯಕಿಯೆಂದರಿಯ ದೆಯೇ ನೀವು ಈ ಉಂಗುರವನ್ನು ಕೊಟ್ಟಿರಾ ? "

ಆ ಮಾತು ಕೇಳಿಯಂತೂ ಮಾಧೂರಾಯನಿಗೆ, ಸುತ್ತಿಮುತ್ತಿ ಚುಚ್ಚುತ್ತಿದ್ದ ನಾಚಿಕೆಯು ತನ್ನನ್ನು ಹರಿದು ತಿನ್ನುವಂತೆ ಭಾವನೆ

ಯಾಯಿತು. ಹಾಗೆ ಆಕೆವು ಮೀರಿ ಮಾತನಾಡುವದಕ್ಕೆ ಯಾವ ದೇವರು ಬುದ್ಧಿ ಕೊಟ್ಟನೋ ಎಂದು ಹಳಹಳಿಸಿದ. ಈ ರಂಗನಾಯಕಿ ಯೊಡನೆ ತನ್ನ ಸಂಬಂಧವಿದೆಯೆಂದು ತಿಳಿದು ತನ್ನ ಸಂಬಗೆಯ ಮಿತ್ರ ರೆಲ್ಲ ತನ್ನ ಸದಾಚರಣೆಯ ಬಗ್ಗೆ ಇನ್ನು ಎಷ್ಟೆಷ್ಟು ಸಂದೇಹಗೊಳ್ಳು ವರೋ ಎಂಬ ಕಲ್ಪನೆಯು ಆತನ ಎದೆಯಲ್ಲಿ ಎಸರು ಸುರುವಿದಂತಹ ವ್ಯಥೆಯನ್ನುಂಟುಮಾಡಿತು. ಈ ಪರಿಯಾದ ದಿಗ್ಭ್ರಮೆಯಿಂದ ಆತನ ಬಾಯಿಂದ ಮಾತುಗಳೇ ಹೊರಡಲಿಲ್ಲ. ಕೊನೆಗೆ ಅವಳೇ ಮಾತನಾಡಿದಳು.

"ನೀವು ಆಮೇಲೆ ಮೈಸೂರಿಗೆ ಬರಲೇ ಇಲ್ಲವಲ್ಲ! ಇನ್ನೆಂದು ಬರುವದು?"

ಮಾಧೂರಾಯನಿಗೆ, ತಾನು ಅವಳಿಗೆ ಉತ್ತರಕೊಡುತ್ತ ನಿಲ್ಲು ವದಕ್ಕಿಂತ ಓಡಿಹೋಗಿ ಬಿಡಬೇಕೆನ್ನಿಸಿತು. ಆದರೆ ಒಮ್ಮೆ ಸಿಕ್ಕಿ ಕೊಂಡಿದ್ದನಲ್ಲ!

"ಇಲ್ಲ, ಸನಿಯದಲ್ಲೇನು ನಾನು ಮೈಸೂರಿಗೆ ಹೋಗು ವವನೇ ಇಲ್ಲ! ಇರಲಿ; ಸದ್ಯಕ್ಕೆ ನಮಸ್ಕಾರ."

"ಅದಾಗದು! ನೀವು ನಿಮಗೆ ಅನುಕೂಲವಾದಾಗಲಾದರೂ ಒಮ್ಮೆ ಆದಷ್ಟು ಬೇಗನೆ ಬಂದೇ ತೀರಬೇಕು. ತಪ್ಪಿಸಲಾಗದು!"

"ಆಗಲಿ, ನೋಡೋಣ; ನನಗೆ ವಿಶೇಷ ಬಿಡುವಿಲ್ಲ."

ಮಾಧೂರಾಯನು ಗಾಯನಮಂದಿರದಿಂದ ಹೊರಹೊರಡು ತ್ತಿರುವಾಗ ಆತನ ಅನೇಕ ಮಿತ್ರರ ಕಣ್ಣುಗಳೆಲ್ಲ ಇದೇನು ಗುಟ್ಟು ಎಂಬ ಒಂದೇ ಪ್ರಶ್ನೆಯನ್ನು ಕೇಳುತ್ತಿದ್ದವು. ಆತನು ಯಾವುದನ್ನೂ ಲಕ್ಷಿಸದೆ ಮೋರೆ ಹುಗಿದುಕೊಂಡು ಮನೆಗೆ ಓಡಿಬಿಟ್ಟ.

ಆ ಮೇಲೆ ಕೆಲ ದಿನ ಮಾಧೂರಾಯನಿಗೆ ಮೋರೆಯೆತ್ತಿ ಕೊಂಡು ಮನೆಯಿಂದ ಹೊರಬೀಳುವದು ಕೂಡ ಅಸಾಧ್ಯವಾಯಿತು. ಇದೇನು ತಾನು ಆಡುಆಡುತ್ತ ಅಡವಿ ಬಿದ್ದದ್ದು ಎಂದು ತನ್ನ ಮೇಲೆ ತಾನೇ ಕೋಪಗೊಳ್ಳುವ. ತನ್ನ ಆದರ್ಶದೃಷ್ಟಿಯು ನುಬ್ಬು ತನ್ನನ್ನು ಹೇಗೆ ಮೋಸಗೊಳಿಸಿತಲ್ಲಾ ಎಂದು ತಾನೇ ಹಳಿದು ಕೊಳ್ಳುವ. ಕೊನೆಗೆ, ಈ ವರೆಗಿನ ತನ್ನ ಹೃದಯದ ಹುಚ್ಚಿಸಿಂದಲೂ ಜನರಲ್ಲಿ ನಡೆದ ಅಪಹಾಸ್ಯದಿಂದಲೂ ಪಾರಾಗುವ ದಾರಿಯಾವು ದೆಂದು ಎಣಿಕೆ ಹಾಕಹತ್ತಿದ.

೧೧

ಮುಂದೆ ಹದಿನೈದು ದಿನಗಳಲ್ಲೇ, ರಂಗನಾಯಕಿಯ ಮಾತಿ ನಂತೆ, ಮೈಸೂರಿಗೆ ಹೊರಡಲು ಅನುಕೂಲತೆಯೊಂದು ಒದಗಿ ಬಂತು. ಆದರೆ ಇಂದು ಮೈಸೂರಿಗೆ ಹೊರಟು ನಿಂತ ಮಾಧೂ ರಾಯನು ಹೊಸಬ; ಮೇಲೆ ಮದುವಣಿಗ.

ಮಾಧೂರಾಯನ ಮದುವೆಗೆ ರಂಗನಾಯಕಿಯು ಬಂದಿರಲಿಲ್ಲ ವೆಂತಲ್ಲ. ತನ್ನ ಮದುವೆಯಲ್ಲಿ ಮಾಧೂರಾಯನು ಸ್ವಸಂತೋಷ ದಿಂದಲೇ ಅವಳದೊಂದು ಸಂಗೀತಕಚೇರಿಯನ್ನು ನಡೆಸಿ, ಸಂಭಾವನೆ ಯೊಂದಿಗೆ ಕೊನೆಯದೆಂದು ಒಂದು ದೀರ್ಘನಮಸ್ಕಾರವನ್ನು ಸಲ್ಲಿಸಿದ.

ನಿರೋಪದ ಕಾಲಕ್ಕೆ "ಹೀಗಾದುದರಿಂದಲೂ ಯಾವ ಹಾನಿ ಯಾಗಲಿಲ್ಲವಲ್ಲ" ಎಂದೆನ್ನುತ್ತ ಅವಳು ಮತ್ತೊಂದು ನಗೆಮಲ್ಲಿಗೆ ಯನ್ನರಳಿಸಿ ಹೊರಟುಹೋದಳು.

ಆದರೆ ಆ ನಗೆಯು ಮಾಧೂರಾಯನಿಗೆ ವಜ್ರದ ಮಲ್ಲಿಗೆಯಂತೆನಿಸಿತು. ಅಂದು ಆ ಪ್ಯಾಸೆಂಜರದಲ್ಲಿ ಇಂಥದೇ ಒಂದು ನಗೆಯು ತನ್ನಲ್ಲಿ ಹುಟ್ಟಿಸಿದ ಉನ್ಮಾದತರಂಗಗಳ ಹೊಡತದ ಅನುಭವವು ಮತ್ತೊಮ್ಮೆ ತೋರಿಬಂದಂತಾಗಲು ಆತನು ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿ ಶ್ರೀರಂಗನನ್ನು ನೆನೆಸಿಕೊಂಡನು.



# ಮುಕ್ತಿಯಾತ್ರೆ

೧

ಹೆಂಣಿಗಾಗಲಿ ಗಂಡಿಗಾಗಲಿ ತಾಯಿಯಿದ್ದರೆ ತೌರು. ಆತನಿಗೆ ತಾಯಿಯಿರಲಿಲ್ಲ. ಸಾಲದುದಕ್ಕೆ ಮಲತಾಯಿಯೊಬ್ಬಳಿದ್ದಳು. ಆದುದರಿಂದ ಆತನ ಬಾಳುವೆಯು ಬೆಂಕಿಗೆ ಹುಲ್ಲು ಹಾಕಿದಂತಾಗಿತ್ತು. ಪಾಪ! ತೀರ ಚಿಕ್ಕವನಿರುವಾಗಲೇ ಆತ ಪರದೇಶಿಯಾಗಿದ್ದವನು ಮಲತಾಯಿ ಒಂದೊಡನೆ ದೆಸೆಗೇಡಿಯೂ ಆಗಿಹೋದ. ಎಳೆ ಮಗುವಾಗಿರುವಾಗಲೇ ಆತನು ಪರಿಪರಿಯ ಸಂಕಟಗಳಿಗೆ ಗುರಿಯಾಗಬೇಕಾಯಿತು.

ನನಗೆ ತಾಯಿಯಿದ್ದಳು; ಎಂದು ಸರ್ವಭಾಗ್ಯವೂ ಇತ್ತು. ತಂದೆಯನ್ನು ನಾನು ಕಂಡರಿಯೆ. ಆ ತಂದೆ ಇಂಥದಕ್ಕೆ ಬೇಕು ಎಂದು ಒಮ್ಮೆಯೂ ನನಗನಿಸಿರಲಿಲ್ಲ. ತಾಯಿ ಅಚ್ಚುಮೆಚ್ಚಿನಾಕೆ. ಮುಂಡಾಡಿ ಕೊಂಡಾಡಿ ನನ್ನನ್ನು ಬೆಳಿಸಿದ್ದಳು. ಈ ಬಗೆಯ ತನ್ನೆದೆಯ ಪ್ರೀತಿಗಾಗಿಯೇ ಅವಳು ಮತ್ತೆ ಮದುವೆ ಮಾಡಿಕೊಂಡಿರಲಿಲ್ಲ. ಮಾಡಿಕೊಂಡು ಹೋಗುವವರೆಲ್ಲ ತಮ್ಮ ಸಂತೋಷದಿಂದಲೇ ಹಾಗೆ ಮಾಡುತ್ತಾರೆಂದು ನನಗನಿಸುವದಿಲ್ಲ. ಏನೋ ಆಸರ ತಪ್ಪಿ ದಿಕ್ಕುಗಾಣದವರು, ಮುಂಗಾಣದೆ ಹಾಗೆ ಮಾಡುತ್ತಿರಬೇಕು. ಆದರೆ ನಮಗೇನು ಹಾಗಿರಲಿಲ್ಲ. ಇರುವವರೆಗೆ ನನ್ನ ತಂದೆಯು ತಾಯಿಯನ್ನು ಚೆನ್ನಾಗಿ ನೋಡಿಕೊಂಡಿದ್ದನಂತೆ. ಒಳ್ಳೇ ಗಳಿಕೆಯಿಂದ ಮನೆತನವನ್ನು ಹೌದೆನ್ನುವಂತೆ ಮಾಡಿಯಿಟ್ಟಿದ್ದ. ತಂದೆಯ ಪುಣ್ಯ

ವನ್ನೇ ಉಣ್ಣುತ್ತಿದ್ದ ನಮಗೆ ಇನ್ನಾವ ಬಗೆಯ ಕೊರತೆಯೂ ಇರಲಿಲ್ಲ.

ನಮ್ಮ ಮನೆಯಲ್ಲಿ ನಾವು ಮೂವರು : ತಾಯಿ, ನಾನು, ತಂದೆ ಸತ್ತ ವರುಷವೇ ಹುಟ್ಟಿದ ನನ್ನ ಕಿರಿತಮ್ಮ. ತಾಯಿಯ ಜತನ ದಲ್ಲಿ ನಮಗೆ ಬಾಳು ಸುಖಮಯವಾಗಿತ್ತು. ನಾವಿಬ್ಬರು ಮಕ್ಕಳೇ ತಾಯಿಗೆ ಒಂದು ದೊಡ್ಡ ಬಳಗವಾಗಿದ್ದೆವು. ನಮಗೂ ಅವಳೇ ಮೊದಲು, ಅವಳೇ ಕೊನೆಯೆಂದೆನಿಸುತ್ತಿತ್ತು.

ಆತನಿಗೆ ಈ ಬಗೆಯ ನೆಮ್ಮದಿಯು ಕನಸು ನೆನಸಿನಲ್ಲಿಯೂ ಇರಲಿಲ್ಲ. ಅಲ್ಲದೆ ಸಾಕಷ್ಟು ದುಕ್ಕ ಮೂರ್ತಿಮಂತವಾಗಿ ಆತನ ಕನಸು ನೆನಸುಗಳನ್ನೂ ದೇಹಮನಸುಗಳನ್ನೂ ತಿಕ್ಕಿಮುಕ್ಕುತ್ತಿತ್ತು. ಆತನ ಆ ಮಲತಾಯಿಯ ನಡತೆ ಚನ್ನಾಗಿರಲಿಲ್ಲವಂತೆ. ಎಂದ ಮೇಲೆ ಆತನು ಅವಳೆದೆಯಲ್ಲಿ ಅಳುಕುಮುಳ್ಳಾಗಿರಬೇಡವೇ. ಅಂತೇ ಅವಳು ಆತನನ್ನು ಏನಾದರೊಂದು ನೆವದಿಂದ ಇಪ್ಪತ್ತುನಾಲ್ಕು ತಾಸೂ ಮನೆಯಾಚೆಗೆ ಅಟ್ಟುತ್ತಿದ್ದಳು. ಗಂಡುಗೆಟ್ಟ ಆತನ ತಂದೆ ಅದನ್ನೆಲ್ಲ ನೋಡಿ ಹೇಗೆ ತಾಳಿಕೊಂಡು ಕೈಮುಚ್ಚಿಕೊಂಡು ಕೂಡು ತ್ತಿದ್ದನೋ!! ಹೀಗೆ ತಂದೆಯೆಂಬಾತನಿದ್ದರೂ, ಹಿಂದುಮುಂದಿಲ್ಲ ದಾಗಿ ಆತನು ಬಯಲುಬಾಳಿನಲ್ಲಿ ಹೇಗೊ ಅಂಡಲೆಯುತ್ತಲಿದ್ದ.

೨

ನಾನೆಂದರೆ ಆತನಿಗೆ ಜೀವಪ್ರಾಣ. ನಾನು ಬಳಿಯಲ್ಲಿದ್ದರೆ ಆತನು ತನ್ನೆಲ್ಲ ದುಕ್ಕವನ್ನೂ ಹಸಿವುನೀರಡಿಕೆಗಳನ್ನೂ ಮರೆತು ಬಿಡುವ. ಅಷ್ಟು ಕಷ್ಟಗಳ ನಡುವೆ ಸಿಕ್ಕು ಎಲಿವಿಲಿ ಒದೆದಾಡುವ ಆತನ ಜೀವ, ನಾನು ಬಳಿಯಲ್ಲಿದ್ದಾಗ, ಒಂದು ಬಗೆಯ ಸಮಾ

ಧ್ಯಾನವನ್ನು ತಾಳುವದು. ನಾನಿರಲು ಆತನಿಗಿನ್ನಾವುದೂ ಬೇಡ. ಆ ಗಳಿಗೆ ಆತ ತನ್ನ ಪರಿಯನ್ನೂ ಇರವನ್ನೂ ಮರೆದುಬಿಡುವ.

ನನ್ನದೂ ಆತನದೂ ಮೊದಲು ಗುರುತಾದಾಗ ನಾನು ಏಳು ವರ್ಷದವಳು. ಆತನಿಗೆ ಹೆಚ್ಚಾದರೆ ಹತ್ತು ಇರಬೇಕು. ನಾವಿಬ್ಬರೂ ಮೊಟ್ಟಮೊದಲು ಬೆಟ್ಟಿಯಾದದ್ದು ಎತ್ತಿನಕೆರೆಯ ಹುಲ್ಲುಬನ್ನಿಯಲ್ಲಿ. ಆಗ ನಾನು ಶಗಣಿ ಹಿಡಿಯಲು ಹೋಗಿದ್ದೆ. ಆತ ತನ್ನ ದನದ ಹಿಂಡನ್ನೆಲ್ಲ ಮೇಯಬಿಟ್ಟು, ಒಂದು ಗಿಡದಡಿಯಲ್ಲಿ ಕುಳಿತು, ಬಾದಕೋಲ–ಕೊಳಲನ್ನು ಊದಲು ಎತ್ತುಗಡೆ ಮಾಡುತ್ತಿದ್ದ. ಆಗ ಆತನ ಸಂಗಡ ಮತ್ತೂ ಕೆಲವು ಹುಡುಗರಿದ್ದರು. ನಾವಾಗ ತೀರ ಚಿಕ್ಕವರು. ಹೆಣ್ಣು ಗಂಡೆಂಬ ಎರಡು ಬಗೆಯಿರಲಿಲ್ಲ. ಅಂತೆ ನಮ್ಮಿಬ್ಬರ ಗುರುತಾಗಲು ಹೊತ್ತು ಹಿಡಿಯಲಿಲ್ಲ. ಮೊದಲದಿನದ ಗಳಿಗೆಯ ಗುರುತು ಕೊನೆಯವರೆಗೂ ಉಳಿದುಬಿಟ್ಟಿತು. ಅಂದಿನ ದಿನ ಆತನೂ ಆತನ ಗೆಳೆಯರೂ ಕೂಡಿ ನಾನು ಹೊರಲಾರದಷ್ಟು ಶಗಣಿ ಮಾಡಿ ಕೊಟ್ಟರು.

ನನಗೆ ಶಗಣಿ ಹಿಡಿಯುವ ಕೆಲಸ ಹಗುರಾಗುತ್ತಿದ್ದುದರಿಂದ, ನಾನು ಇನ್ನಾವೆಡೆಗೂ ಹೋಗದೆ, ದಿನವೂ ಎತ್ತಿನಕೆರೆಯ ಹುಲ್ಲುಬನ್ನಿಗೇ ಹೋಗುತ್ತಿದ್ದೆ. ದಿನವೂ ಆತ ನನಗಿಂತ ಮೊದಲೇ ಅಲ್ಲಿ ಬಂದಿರುತ್ತಿದ್ದ. ಹೀಗೆ ನಾವಿಬ್ಬರೂ ಒಂದೂ ದಿನ ಬಿಡದಂತೆ ಒಬ್ಬರನ್ನೊಬ್ಬರು ಕಾಣುತ್ತಿದ್ದೆವು. ಬರಬರುತ್ತ ನಮ್ಮ ಗುರುತು ಗೆಳೆತನವಾಗಿಬಿಟ್ಟಿತು. ಅಷ್ಟು ಚಿಕ್ಕಂದಿನಲ್ಲೆ ನಮ್ಮಿಬ್ಬರ ಜೀವಗಳು ಒಂದನ್ನೊಂದು ನೆಚ್ಚಿಕೊಂಡವು.

ಆತನ ನೆರವಿನಿಂದ ಬೇರೆ ಹುಡುಗಿಯರಿಗಿಂತ ನನಗೆ ಹೆಚ್ಚಾಗಿ

ಶಗಣಿ ಸಿಗುತ್ತಿತ್ತು. ಅದು ನನಗೊಂದು ಹೆಮ್ಮೆಯ ಮಾತು. ಮೊದಲುಮೊದಲು ಬೆಳಗಿನಲ್ಲಷ್ಟೇ ಹೋಗುತ್ತಿದ್ದವಳು, ಆ ಮೇಲೆ ದಿನಕ್ಕೆರಡು ಸಾರಿಗೆ ಮಾಡಹತ್ತಿದೆ. ಆಗ ನಮ್ಮ ಹಿತ್ತಲದಲ್ಲಿ ನಾನೇ ಮೂರು ಕುಳ್ಳುಬಾನಗಳನ್ನು ಮಾಡಿದ್ದೆನು. ನನಗೆ ಶಗಣಿ ಹಿಡಿ ಯುವ ಕೆಲಸದಲ್ಲಿ ಇಷ್ಟು ಹುರುಪು ಬರುತ್ತಿದ್ದುದು, ಆತನನ್ನು ಎರಡು ಬಿಟ್ಟು ಮೂರು ಸಲ ಬೆಟ್ಟಿಯಾಗಬೇಕೆಂಬ ನನ್ನ ಎದೆಯ ಹಂಬಲಕ್ಕಾಗಿಯೆ. ನಾನು ಬೆಳೆದು ದೊಡ್ಡವಳಾದಂತೆ ನನ್ನ ಹಂಬ ಲವೂ ಬೆಳೆದು ಹಿರಿಹಿರಿದಾಗಿ ಹಿಗ್ಗಹತ್ತಿತು. ನೆಚ್ಚಿದ ಜೀವಗಳು ಮೆಚ್ಚಿಕೊಳ್ಳಹತ್ತಿದವು.

೩

ಅದಕ್ಕಾಗಿಯೇ ನಾನು ತಾಯಿಯನ್ನು ಕೇಳಿಕೊಂಡೆ; ಬೇಡಿ ಕೊಂಡೆ. ಮೊದಲು ಬೇಡವೆಂದರೂ ನನ್ನ ಕಾಟಕ್ಕಾಗಿ ಅವಳು ನನಗೂ ಕೆಲವು ದನಗಳನ್ನು ಗೊತ್ತು ಮಾಡಿಕೊಟ್ಟಳು. ನಾನು, ದನಕಾಯು ವದೇ ನನ್ನ ಜೀವನದ ಹಿರಿಗೆಲಸವೆಂದು ಬಗೆದು ಆ ಕೆಲಸವನ್ನು ಬಳ್ಳೇ ಹೌಸಿನಿಂದ ಆರಂಭ ಮಾಡಿದೆ. ಆ ಮೇಲೆ ನಾನೂ ನನ್ನ ದನವನ್ನು ಅಟ್ಟಿಕೊಂಡು ಎತ್ತಿನಕೆರೆಗೇ ಹೋಗಹತ್ತಿದೆ. ನಾನು ದನಕಾಯುವದನ್ನೇ ಕೈಕೊಂಡದ್ದಕ್ಕಾಗಿ ಆತನಿಗೆ ಹೇಳಲಾರದಷ್ಟು ಹಿಗ್ಗು. ನಾನು ದನಗಾಹಿಯಾದುದರಿಂದ, ನಾವಿಬ್ಬರೂ ಮೊದಲಿನ ಕಿಂತ ಹೆಚ್ಚು ಹೊತ್ತು ಒಟ್ಟಿಗೆ ಇರಲು ಅನುವಾಯಿತು.

ತಾಯಿಯೇಳುವ ಹೊತ್ತಿಗೆ ನಾನೂ ಎದ್ದು, ಆದಷ್ಟು ಬೇಗ ಬೆಳಗಿನ ಕೆಲಸಬೊಗಸೆ ಮುಗಿಸಿಡುತ್ತಿದ್ದೆ. ತಾಯಿ ರೊಟ್ಟೀ ಕಟ್ಟಿ ಕೊಡುವದೊಂದೇ ತಡ ಅದನ್ನು ತಲೆಯ ಮೇಲಿಟ್ಟುಕೊಳ್ಳುತ್ತ,

ನಾನು ತುರುಮಂದಿಗೆ ಓಡಿಯೇ ಹೋಗುತ್ತಿದ್ದೆ. ಆತನು ಅಷ್ಟೊತ್ತಿಗೆ ತನ್ನ ದನಗಳೊಂದಿಗೆ ನನ್ನ ದನಗಳನ್ನೂ ತಾನೇ ಹೊರಡಿಸಿಕೊಂಡು ಬಂದು, ತುರುಮಂದಿಯಲ್ಲಿ ತರುಬಿಕೊಂಡು ನಿಂತು ನನ್ನ ದಾರಿ ಕಾಯುತ್ತಲೇ ಇರುತ್ತಿದ್ದ. ಇಬ್ಬರೂ ಸೇರಿದೆವೆಂದರೆ ಸರಿ, ದನಪನ್ನು ಮುಂದಕ್ಕೆ ಜಿಡುತ್ತಿದ್ದೆವು. ಆತನು ನನಗೆ ಒಂದು ಎಮ್ಮೆಯು ಮೇಲೆ ಏರಿ ಕೂಡಲು ನೆರವಿತ್ತು, ತಾನೂ ಒಂದು ಎಮ್ಮೆಯ ಮೇಲೆ ಕುಳಿತಬಳಿಕ ಇಬ್ಬರೂ ಅಲ್ಲಿಯ ಮಾತು ಇಲ್ಲಿಯ ನಾತು ಆಡುತ್ತ ನಮ್ಮ ಮೆಟ್ಟಿಗೆ ಹೋಗಿ ಮುಟ್ಟುತ್ತಿದ್ದೆವು.

ದನಗಳನ್ನು ಮೇಯಬಿಟ್ಟು, ಇಬ್ಬರೂ ಒಮ್ಮೊಮ್ಮೆ ಯಾವದೊಂದು ಗಿಡದಡಿಯಲ್ಲಿ ಒಟ್ಟಿಗೆ ಕುಳಿತು ನಮ್ಮ ಎಣಿಕೆಗಳಲ್ಲೇ ಮುಳುಗಿ ಎಲ್ಲವನ್ನೂ ಮರೆತು ಬಿಡುತ್ತಿದ್ದೆವು. ಇನ್ನೊಮ್ಮೆ ಕೆರೆಯ ದಂಡೆಯ ಕಲ್ಲುಗಳ ಮೇಲೆ ಕುಳಿತು ಕಾಲುಗಳನ್ನು ನೀರಿನಲ್ಲಿ ಇಳಿಬಿಟ್ಟು ಚಲಪಲ ಮಾಡುತ್ತ ನಮ್ಮ ಹೊತ್ತನ್ನು ಕಳೆಯುತ್ತಿದ್ದೆವು. ಮತ್ತೊಮ್ಮೆ ಆತನು ಮನೆಯಿಂದ ಒಟ್ಟಿಗಳನ್ನೇನಾದರೂ ತಂದಿದ್ದರೆ ಇಬ್ಬರೂ ಸೇರಿ ಅವೆಲ್ಲವನ್ನೂ ಒಗೆಯುತ್ತಿದ್ದೆವು. ಬೇರೊಮ್ಮೆ ನನಗಾಗಿ, ಇಬ್ಬರೂ ಕಾಕುಳ್ಳು ಆರಿಸಲು ತೊಡಗುತ್ತಿದ್ದೆವು. ಮಗುದೊಮ್ಮೆ ಆತನ ಮಲತಾಯಿಯ ಅಪ್ಪಣೆಗಾಗಿ, ಇಬ್ಬರೂ ಸೇರಿ ಕಟ್ಟಿಗೆ ಕೂಡಿಸಲು ಹೋಗುತ್ತಿದ್ದೆವು. ಹೀಗೆ ನಮ್ಮಿಬ್ಬರ ಕೈಮೈಗಳು ಎಣಿಕೆಬಯಕೆಗಳು ಎದೆಯುಸಿರುಗಳು ಒಂದೇ ತಾಲದಲ್ಲಿ ಬೆರೆತು ಬಲಿಯತೊಡಗಿದವು. ಒಬ್ಬರನ್ನೊಬ್ಬರು ಬಿಟ್ಟಿರಬೇಕೆಂದರೆ ಜೀವದ ಸುತ್ತು ಬಂದಂತಾಗುತ್ತಿತ್ತು. ಕಾರಣ ನಾವು ಬೆಳಿಗ್ಗೆ ಆದಷ್ಟು ಬೇಗ ಮನೆಯಿಂದ ಹೊರಟು ಇರುಳು ಆದಷ್ಟು ಹೊತ್ತುಮಾಡಿ

ಹಿಂದಿರುಗುತ್ತಿದ್ದೆವು. ನೆಚ್ಚಿಮೆಚ್ಚಿ ಕೂಡಿಕೊಂಡ ಎದೆಗಳೆರಡು ಒಂದಿ ಹೊಂದಿಕೊಳ್ಳಲು ತೊಡಗಿದವು.

೪

ಆತನೆಂದರೆ ನನಗೂ ಒಂದು ತರದ ಅಚ್ಚುಮೆಚ್ಚು; ಒಂದು ತರದ ಹುಚ್ಚುನೆಚ್ಚು. ಆತನ ಬಳಿಯಲ್ಲಿದ್ದಾಗ ನನ್ನ ಹೃದಯ ಜೀಕಿ ಜೀಕಿ ಉಯ್ಯಾಲೆಯಾಡುತ್ತ ಕೇಕೆ ಹಾಕಿ ಕುಳಿಯುವಂತೆ ಎನಿಸು ವದು. ಆ ತೂಗಾಟದ ತಾಳದಲ್ಲಿ ನನ್ನ ಬಗೆಗಳೆಲ್ಲ ಬೆರೆತುಬಿಡಲು, ನಾನಾವುದೊ ಒಂದು ದೂರದ ಕನಸು-ನಾಡಿನ ಗಾಳಿಯಲೆಗಳ ಗುಂಟ ಈಸುತ್ತ ತೇಲುತ್ತ ಹೋಗುತ್ತಿರುವಂತೆ ಭಾಸವಾಗುವದು. ಅದೇನೊ ಅಂಥ ಮಾಟ! ನಾನರಿಯೆ.— ಬಲ್ಲವರೇ ಬಲ್ಲರಂತೆ ಬೆಲ್ಲದ ಸವಿಯ. ನನಗೆ ಅನಿಸುತ್ತಿದ್ದುದೂ ಒಂದು ಬೆಲ್ಲದಂತಹ ಮಾತೇ.

ಆತನೇನು ಅಂಥ ರೂಪವಂತನಲ್ಲ. ಆತನ ಮೋರೆಯಲ್ಲಿ ಹೇಳುವಂಥ ಬೆಡಗಿನ ಮಾಟವೂ ಇರಲಿಲ್ಲ. ಕಣ್ಣುಮನಸುಗಳನ್ನು ಎಳೆದೊಯ್ಯುವಂಥ ರೂಪವಂತರನೇಕರನ್ನು ನಾನು ನೋಡಿದ್ದೇನೆ. ಆದರೆ ಆತನಂತೆ ನನ್ನ ಹೃದಯವನ್ನು ಎಳೆದವರೊಬ್ಬರನ್ನೂ ನಾನು ಕಾಣೆ. ಅದೇನೊ! ಆತನ ಸ್ವಭಾವವಿರಬಹುದೇ! ಇದ್ದರೂ ಇರ ಬಹುದು. ಆದರೆ, ಜಗತ್ತಿನಲ್ಲಿ ಒಳ್ಳೆಯ ಸ್ವಭಾವದ, ಮೃದುಹೃದ ಯದ, ಎಳೆಗರುಳಿನ ಜನರು ಇನ್ನೂ ಹಲವರು ಇದ್ದುದನ್ನು ನಾನು ಕಂಡು, ತಿಳಿದು, ಅರಿತು ಬಲ್ಲೆ. ಇಂಥ ಕೆಲವರನ್ನು, ನಾನು ಮನ ಮುಟ್ಟಿ ಪ್ರೀತಿಸಿದ್ದೇನೆ. ಆದರೆ ಆ ಪ್ರೀತಿಯಲ್ಲಿ ಹೃದಯಕ್ಕೆ ಶಾಂತಿ, ತೃಪ್ತಿಯಿರಲಿಲ್ಲ. ಆದರೆ ಆತನೆಂದರೆ ನನ್ನ ಜೀವಕ್ಕೆ ಇನ್ನೂ ಇಂಥ ದೊಂದು ಬೇಕು ಎಂದೆನಿಸುತ್ತಿರಲಿಲ್ಲ. ಆತನೆಡೆಯಲ್ಲಿದ್ದಾಗ, ಆ

ಗಳಿಗೆಗೇ ಜಗವು ಮುಗಿದರೆ ನನಗೆ ಬೇಡವೆನಿಸುತ್ತಿರಲಿಲ್ಲ. ಹೀಗಿತ್ತು ನನ್ನ ಪರಿ.

ಸೃಷ್ಟಿಯ ಜೀವಿಗಳೆಲ್ಲ ಹಲವು ಪಡಿಯಚ್ಚಿನವುಗಳಾಗಿವೆ. ಈ ಜೀವನಯಾತ್ರೆಯಲ್ಲಿ, ಪ್ರತಿಯೊಂದು ಜೀವವೂ ತನ್ನ ಪಡಿಯಚ್ಚಿನ ಇನ್ನೊಂದು ಜೀವವನ್ನು ಹುಡುಕುತ್ತ ತೊಳಲಿ ಅಲೆಯುತ್ತಿರುತ್ತದೆ. ಅದೆಷ್ಟೋ ತೊಳಲಿ ಬಳಲಿದ ಮೇಲೆ, ಎಂದೋ ಒಮ್ಮೆ ಅಂಥ ಜೀವ ದೊರಕುವದುಂಟು. ಆಗಲೆ ಆ ಜೀವಗಳೆರಡು ಒಪ್ಪಿ, ಅಪ್ಪಿ, ಒಂದಿ, ಹೊಂದಿ, ಬೆರೆತುಕೊಳ್ಳುವವು. ಅಲ್ಲಿಗೆ ಅವುಗಳ ಯಾತ್ರೆಯು ಮುಗಿವು. ಆತನಲ್ಲಿ ನನ್ನ ಜೀವ ಇಂಥದೊಂದು ನೆರೆತೆಯನ್ನು ಕಂಡುಕೊಂಡಿರಬೇಕು. ಆಗ ನಾವಿಬ್ಬರೂ ತೀರ ಚಿಕ್ಕವರೇನೊ ನಿಜ. ಆದರೆ ನಮ್ಮ ಜೀವಗಳು ಎಷ್ಟು ದಿನಗಳಿಂದ ಒಂದನ್ನೊಂದು ಅರಸುತ್ತಲಿದ್ದವೆಂಬದರ ಲೆಕ್ಕ ಬೇಡವೆ!

೫

ಆತನ ಕತೆಯೊಂದು ರಾಮಾಯಣವೆ. ನಮ್ಮ ಗೆಳೆತನವು ಆ ದುಕ್ಕದಿಂದ ಆತನನ್ನು ತೇಲಿಸಿ ಆಚೆಗೆ ದಾಟಿಸುತ್ತಿತ್ತು. ನನ್ನ ಗುರುತಾದಂದಿನಿಂದ, ಆತನ ಬಾಳಿನಲ್ಲಿ ಸೊಗಸು ಮತ್ತೊಮ್ಮೆ ಮೊಳಕೆಯೊಡೆಯಿತು. 'ಊರು ಬೇಡಾಗಿತ್ತು; ಗೌಡನೂ ಬೇಡವೆಂದ' ಎಂಬಂತೆ ಆತನ ಮಲತಾಯಿ ಆತನನ್ನು ಹೆಚ್ಚಾಗಿ ಹೊರಕ್ಕಟ್ಟುತ್ತಿದ್ದುದೇ ನಮಗೆ ಒಳ್ಳೆಯದಾಗಿತ್ತು.

ಬೆಳಿಗ್ಗೆದ್ದರೆ ಇಬ್ಬರಿಗೂ ಮುಖ್ಯ ಕೆಲಸವೆಂದರೆ ದನ ಕಾಯಲು ಹೊರಡುವದೇ. ನನ್ನ ತಾಯಿ, ನಾನು ಬೆಳಗಿನ ಸಣಪುಟ್ಟ ಕೆಲಸಗಳನ್ನು ತೀರಿಸುವದರೊಳಗೇ, ರೊಟ್ಟೀ ಮಾಡಿ, ಕಾರಬೇಳೆ ಹಚ್ಚಿ,

ಕರೆದು ಕೈಯಲ್ಲಿ ಕೊಡುವಳು. ಅದಷ್ಟು ತಿಂದು, ತಾಯಿ ಕಟ್ಟಿ ಕೊಟ್ಟ ಬುತ್ತಿರೊಟ್ಟಿಗಳನ್ನು ತೆಗೆದುಕೊಂಡು ಹೊರಡುತ್ತಿದ್ದೆ. ಆದರೆ ಆತನಿಗೆ ಇಷ್ಟೆಲ್ಲ ಸುಖವು ಎಲ್ಲಿಂದ ಬರಬೇಕು ! ತಂಗಳ ಹಳಬಲ ವೇನಾದರೂ ಉಳಿದಿದ್ದರೆ ಆತನ ಪುಣ್ಯ. ಅದಂನೇ ಸ್ವಲ್ಪ ತಿಂದು ಸ್ವಲ್ಪ ಕಟ್ಟಿಕೊಂಡು ಬರುತ್ತಿದ್ದ. ಸೂರ್ಯನು ನೆತ್ತಿಗೆ ಬಂದನೆಂದರೆ, ನಾವಿಬ್ಬರೂ ಕೆರೆಯ ದಂಡೆಗೆ ಹೋಗಿ ನಮ್ಮನಮ್ಮ ಗಂಟುಗಳನ್ನು ಬಿಚ್ಚಿಕೊಂಡು ಎದುರುಬದುರು ಕುಳ್ಳಿರುತ್ತಿದ್ದೆವು. ನನ್ನ ಗಂಟಿನಲ್ಲಿ ಎರಡಾಗಲೀ ಮೂರಾಗಲೀ ರೊಟ್ಟಿ, ಇಷ್ಟಿಷ್ಟು ಬುತ್ತಿ, ಮೇಲೆ ಕಾರಬೇಳೆ, ಇಲ್ಲವೆ ಹಿಟ್ಟಿನ ಪಲ್ಲೆ, ಅಲ್ಲದೆ ಒಂದೆರಡು ಮೆಣಸಿನ ಕಾಯಿ, ಇಲ್ಲದಿದ್ದರೆ ಒಂದು ಎಳೆ ಬದನೆಕಾಯಿ, ಅದೂ ತಪ್ಪಿದರೆ ಹಾರೂರ ಮನೆಯವರು ಕೊಟ್ಟ ಉಪ್ಪಿನಕಾಯಿ, ಒಮ್ಮೊಮ್ಮೆ ಪುಂಡೀಪಲ್ಲೆ ಇಲ್ಲವೆ ಹರವಿಯದು, ಅಥವಾ ಮೆಂತೆಯ ತೊಪ್ಪಲ ಹೀಗೆ ಬೇಕುಬೇಕಾದದ್ದೇ ಇದ್ದುಬಿಡುತ್ತಿತ್ತು. ಆತನ ಗಂಟಿನಲ್ಲಿ ಬಹಳವೆಂದರೆ ಎರಡು ಮೂರು ತಂಗಳ ರೊಟ್ಟಿಯ ತುಣುಕುಗಳಿದ್ದರೆ ತಲೆಬಡೆಯಿತು. ಅದೂ ಒಣ ತಂಗಳ ರೊಟ್ಟಿ. ಜೊತೆಗೆ ಕೂಡ ಏನೂ ಇರುತ್ತಿರಲಿಲ್ಲ. ಆತನು, ಬರುವಾಗ ಹಾದಿಯ ಹೊಲದ ಹಕ್ಕರಿಕೆಯನ್ನು ಕಿತ್ತುಕೊಂಡು ರೊಟ್ಟಿಗೆ ಜೊತೆಯೆಂದಿಟ್ಟುಕೊಂಡಿ ರುತ್ತಿದ್ದ. ಆತನು ಗಂಟು ಬಿಚ್ಚಿ ಎದುರಿಗಿಟ್ಟುಕೊಂಡು, ನನ್ನನ್ನು ಒಮ್ಮೆ ತೆರವುಗಣ್ಣಿನಿಂದ ಹಾಲಿಸುತ್ತಿದ್ದಾಗ, ನನ್ನೆದೆ ಬಿರಿಯುವ ತೆನಿಸುವದು. ಅಂತೆ, ಆತನು ನನ್ನೆದುರಿಗೆ ತನ್ನ ಗಂಟನ್ನು ಬಿಚ್ಚಲು ನಾಚುತ್ತಿದ್ದ,— ಹೆದರುತ್ತಿದ್ದ. ಆತನು ಹಾಗೆ ಕೂಳುಗಾಣದೆ ಬಂದಿರುವಾಗ ನಾನು ಮನೆಯಲ್ಲಿ, ತಾಯಿಯು ಸವಿಸವಿ ಮಾಡಿ

ಇಕ್ಕಿದುದನ್ನೆಲ್ಲ ಮನಸಾರೆ ಕೆಚ್ಚಿ, ಮೇಲೆ ಬೇಕುಬೇಕಾದದ್ದನ್ನು ಕಟ್ಟಿಕೊಂಡು ಒಯ್ಯುವದಕ್ಕಾಗಿ ನನಗೂ ನನ್ನ ಗಂಟನ್ನು ಬಿಚ್ಚುವಾಗ ನಾಚಿಕೆಯಾಗುತ್ತಿತ್ತು. ಆದರೆ ಇತ್ತೀಚೆ ನಮ್ಮಿಬ್ಬರ ನಾಚಿಕೆಗಳೂ ಹಳೇ ಮೋರೆಗೆ ಬಿದ್ದಿದ್ದವು. ಇಬ್ಬರೂ ಮನಸು ಬಿಚ್ಚಿ ನಡೆದುಕೊಳ್ಳ ಹತ್ತಿದ್ದೆವು. ಆತನು ತಂದುದನ್ನು ಮೊದಲು ತೀರಿಸಿ, ಆ ಮೇಲೆ ನಾನು ತಂದುದನ್ನು ತಿನ್ನುತ್ತಿದ್ದೆವು. ನಾನು ಬೇಕೆಂತಲೇ ನಾಲ್ಕು ತುತ್ತು ಕಡಮೆಯುಂಡು, ಆತನಿಗಾಗಿ ಸಂಜೆಗೆಂದು ಉಳಿಸುತ್ತಿದ್ದೆ. ಏಕೆಂದರೆ ನಾನು ಮನೆಗೆ ಹೋದರೆ ಸಂಜೆಯ ಊಟ ತಪ್ಪುತ್ತಿರಲಿಲ್ಲ. ಆದರೆ ಆತನಿಗೆ ಏನೂ ದೊರೆಯದು. ಪಾಪ, ಮರುದಿನ ನಾವಿಬ್ಬರೂ ಮತ್ತೆ ಕೆರೆದಂಡೆಯ ಮೇಲೆ ಕುಳಿತು ಉಣ್ಣುವ ಹೊತ್ತಿನ ವರೆಗೆಂದರೆ, ಆತ ಹೇಗೋ ಕಣ್ಣಲ್ಲಿ ಜೀವ ಹಿಡಿದುಕೊಂಡು ಇರುತ್ತಿದ್ದ.

ನಾವಿಬ್ಬರೂ ದನಕಾಯುವದರಿಂದ ಬರುವ ಹಣವು ನೆಟ್ಟಗೆ ನಮ್ಮನಮ್ಮ ಮನೆಗಳನ್ನೇ ಕಾಣುತ್ತಿತ್ತು. ಕಾರಣ ಇಬ್ಬರ ಹತ್ತರವೂ ಹಣವಿರುತ್ತಿರಲಿಲ್ಲ. ಆದರೆ ನನ್ನ ತಾಯಿ, ನಾನು ಬೇಡಿದರೆ ಇಲ್ಲವೆನ್ನುತ್ತಿರಲಿಲ್ಲ. ಆ ಹಣದಿಂದ ಆತನಿಗೇನಾದರೂ ಉಪಯೋಗವಾಗುತ್ತಿತ್ತು. ಇತ್ತೀಚೆ ನಾನು ದೊಡ್ಡವಳಾದ ಮೇಲೆ ನನ್ನ ಗಳಿಕೆಯ ಹಣವು ನನ್ನ ಕೈಗೇ ಬರುತ್ತಿತ್ತು. ಅದರಲ್ಲಿ ಅರ್ಧವನ್ನಾದರೂ ಆತನಿಗೆ ಕೊಡುತ್ತಿದ್ದೆ. ಏನೇ ಆದರೂ ನಾನು ಕೊಟ್ಟರೆ ಉಂಟು; ಇಲ್ಲವಾದರೆ ಆತನ ಗತಿ ಹೇಳಲಿಕ್ಕಿಲ್ಲ. ಮನೆಯಲ್ಲಿ ಆತನಿಗೆ ಬೇಕಾದಷ್ಟು ಹೊಡತಬಡತಗಳು. ಮೇಲೆ ಅರೆಹೊಟ್ಟೆ. ಅದೂ ಸಾಲದೆ, ಆತನಹತ್ತಿರ ಏನಾದರೂ ಒಂದೆರಡು ಕಾಸುಗಳು ಹೊರಟರೆ ಆತನು ಕಳ್ಳತನದ ದೂಷಣೆಗೂ ಶಿಕ್ಷೆಗೂ ಗುರಿಯಾಗುತ್ತಿದ್ದನು.

ಹೀಗಾಗಿ ನಾನು ಕೂಡ ಆತನಿಗೆ ಏನನ್ನೂ ಕೊಡಬಾರದಾಗಿತ್ತು. ಹೀಗಿರುತ್ತಿರುವಾಗಲೇ ನಾವು ಬೆಳೆದು ದೊಡ್ಡವರಾದೆವು.

೬

ಇಬ್ಬರೂ ಪ್ರಾಯದವರಾಗಲು ನಮ್ಮ ಮನಸ್ಥಿತಿಯೂ, ಪರಿಸ್ಥಿತಿಯೂ ಬದಲಾಗುತ್ತ ಬಂದವು. ನಮ್ಮ ಜೀವಗಳು ಒಂದನ್ನೊಂದು ಗಂಟು ಹಾಕಿಕೊಂಡುಬಿಟ್ಟಿದ್ದವು. ನಾವಿಬ್ಬರು ಮದುವೆ ಮಾಡಿಕೊಳ್ಳುವದೆಂದು ಗೊತ್ತುಮಾಡಿಕೊಂಡೆವು. ಆದರೇನು? ಹಾಲಿಲ್ಲದ ಹಬ್ಬವಲ್ಲ ಹಣವಿಲ್ಲದ ಬಾಳುವೆಯಲ್ಲ. ಆತನಿಗೆ ಏನು ಮಾಡುವದಕ್ಕೂ ಬಗೆ ತೋಚದು. ಹೇಗೆ ಬಾಳುವೆಗೆ ಮೊದಲು ಮಾಡುವದು? ಎಂಬದು ಒಂದು ಒಗಟವಾಗಿಬಿಟ್ಟಿತು.

ದೊಡ್ಡವನಾದ ಮೇಲೆ ಆತ ತನ್ನ ಮನೆಯ ಗೊಡವೆಯನ್ನೇ ಬಿಟ್ಟುಬಿಟ್ಟು ಹಗಲಿರುಳು ಊರಹೊರಗೇ ಇರುತ್ತಿದ್ದ. ನಾನು ನನ್ನ ಮನೆಯಿಂದ ಆತನಿಗಾಗಿ ಊಟವನ್ನು ಒಯ್ಯುತ್ತಿದ್ದೆ. ಆತನು, ಕುಳ್ಳುಕಟ್ಟಿಗೆ ಕೂಡಿಸಿಡುತ್ತಿದ್ದ. ನಾನವುಗಳನ್ನು ಧಾರವಾಡಕ್ಕೆ ಹೋಗಿ ಮಾರಿ ಬರುತ್ತಿದ್ದೆ. ಆಗ ಆತ ನನ್ನ ದನಗಳನ್ನು ಕಾಯುತ್ತಿದ್ದ. ಹೊತ್ತು ಮುಳುಗುವದರೊಳಗೆ ಮರಳಿ, ಆತನಲ್ಲಿಗೆ ಹೋಗಿ, ಬಂದ ಹಣವನ್ನೊಪ್ಪಿಸಿ ನನ್ನ ದನದೊಂದಿಗೆ ನಾನು ಊರ ಕಡೆಗೆ ಹೊರಡುತ್ತಿದ್ದೆ. ಆತನೂ ನನ್ನನ್ನು ಕಳಿಸಲು ಅಗಸೆಯವರೆಗೆ ಬಂದು ಹಿಂದಿರುಗಿ ಹೋಗಿ ಕೆರೆಯ ಮರಡಿಯಲ್ಲಿದ್ದ ಮರುಳಯ್ಯನ ಗವಿಯಲ್ಲಿ ಬಿದ್ದುಕೊಂಡು ಇರುಳು ಕಳೆಯುತ್ತಿದ್ದ. ನಾನು ನನ್ನ ತಾಯಿಯ ಮಗ್ಗುಲಲ್ಲಿ ಕೌದಿಯ ಮುಸುಕಿನಲ್ಲಿ ಬೆಚ್ಚಗೆ ಮಲಗಿಕೊಳ್ಳುತ್ತಿದ್ದೆ.

೭

ನಾನು ಆತನನ್ನು ಮದುವೆಯಾಗಬೇಕೆಂಬ ಮಾತು ನನ್ನ ತಾಯಿಯ ಮನಸಿಗೆ ಸರಿಬೀಳಲಿಲ್ಲ. ನಾನು ಎಷ್ಟು ಹೇಳಿಕೊಂಡರೂ ನನ್ನೆದೆಯ ಕಳವಳವು ಅವಳಿಗೆ ಹೊಳೆಯದೆ ಹೋಯಿತು. ಆತನು ತಿರುಕ, ಗತಿಗಾಣದ ದರಿದ್ರ, ಅಡವಿಯ ಹುಂಬ ಎಂದು ಅವಳ ಎಣಿಕೆ. ನಮಗಾದರೊ ಒಬ್ಬರನ್ನು ಬಿಟ್ಟು ಇನ್ನೊಬ್ಬರಿಗೆ ಉಸಿರು ಕೂಡ ಆಡದು. ಅವಳಿಗಿದೆಲ್ಲ ತಿಳಿಯದು. ಮೊದಲು ನನ್ನ ತಾಯಿ ಎಲ್ಲ ಬಗೆಯಿಂದಲೂ ನನಗೆ ಮೆಚ್ಚಿನವಳಾಗಿದ್ದಳು. ನಾನು ಮದುವೆಯ ಮಾತೆತ್ತಿದ ಮೇಲೆ, ನನ್ನ ತಾಯಿಯೇ ನನಗೆ ವೈರಿಯಾದಳು. ಅವಳು ನಮ್ಮಿಂದ ಆಣೆಯನ್ನು ಕೂಡ ಮಾಡಿಸಿಕೊಂಡಳು.

ನನ್ನ ತಾಯಿ ಬಲುದಿನಗಳಿಂದ, ತನ್ನ ಹಣೆಯ ಬೆವರು ಹರಿಸಿ ಸ್ವಲ್ಪ ಹಣವನ್ನು ಕೂಡಹಾಕಿದ್ದಳು. ಅವಳು ಪಟ್ಟ ಕಷ್ಟವೆಲ್ಲ ನನಗಾಗಿಯೇ ಎಂದು ನಾನು ಬಲ್ಲೆ. ನನ್ನನ್ನು ಒಂದು ಒಳ್ಳೆಯ ಮನೆಗೆ ಕೊಡಬೇಕೆಂದು ಅವಳ ಹಂಬಲ. ಅವಳ ಹಂಬಲದ ಒಳ್ಳೆಯತನವನ್ನೂ ನಾನು ಅರಿತುದುಂಟು. ಆದರೆ ಅವಳ ಯತ್ನವೆಲ್ಲ ನನ್ನ ಪಾಲಿಗೆ ಮಾವಾಗದೆ ಬೇವಾಗತೊಡಗಿತು.

ಆತನು, ತನ್ನ ಮನೆಬಿಟ್ಟಮೇಲೆ, ಕೈಯಲ್ಲಿ ಹತ್ತಿಪ್ಪತ್ತು ರೂಪಾಯಿ ಮಾಡಿಕೊಂಡಿದ್ದ. ನನ್ನ ಕೆಲವೊಂದು ಹಣವೂ ಆತನ ಬಳಿಯಲ್ಲಿತ್ತು. ಕೊನೆಗೊಮ್ಮೆ, ಇಬ್ಬರೂ ಓಡಿಹೋಗಿಬಿಡಬೇಕೆಂಬ ವಿಚಾರವೂ ಬಂತು. ಆದರೆ ಅದರಿಂದ ನನ್ನ ತಾಯಿಯ ಕರುಳು ಬಲು ಬಲು ಮಿಡುಕುತ್ತಿತ್ತು. ನಮ್ಮ ಆನಂದಕಕ್ಕಾಗಿಯೇ ಆದರೂ ಇನ್ನೊಂದು ಜೀವವನ್ನು ತಳತಳ ಎನ್ನಿಸುವದು ಆತನಿಗೆ ಒಪ್ಪಲಿಲ್ಲ.

ನನಗೂ ನನ್ನ ತಾಯಿಯ ದುಃಖದ ಚಿತ್ರವು ಕಣ್ಣೆದುರು ಕಟ್ಟಿ ಆ ಕೆಲಸಕ್ಕೆ ಜೀವ ಹೇಸಿತು. ಅಂತೂ ನನ್ನ ಮದುವೆ ನೆನೆಗುದಿಗೆ ಬಿತ್ತು. ಅಲ್ಲದೆ ನಮ್ಮ ಮನೆತನದಲ್ಲಿ ತುಸು ಒಡಕೂ ಹುಟ್ಟಿತು.

೮

ಒಂದು ದಿನ ಬೆಳಿಗ್ಗೆ, ನಾನಿನ್ನೂ ದನ ಅಟ್ಟಿಕೊಂಡು ಹೋಗುವದರೊಳಗೇ ಆತನು, ತುರುಮಂದಿಯಲ್ಲಿ ನಿಂತು ನನ್ನ ದಾರಿಯನ್ನು ಕಾಯುತ್ತಿದ್ದ. ಎಂದೂ ಇಲ್ಲದೆ ಅಂದು ಆತನು ಊರಲ್ಲಿ ಒಂದುದರಿಂದ ನನಗೆ ಹಿಡಿಸಲಾರದಷ್ಟು ಸೋಜಿಗವಾಯಿತು. ದನಗಳನ್ನು ಅಟ್ಟಿಕೊಂಡು ಇಬ್ಬರೂ ಮುಂದೆ ಸಾಗಿದೆವು. ದಾರಿಯಲ್ಲಿ ಆತನು ತಾನು ಬಂದ ಕಾರಣವನ್ನೂ ಹೇಳಿದ. ನಮ್ಮ ಮೇಲೆ ದೇವರು ಕಣ್ಣು ತೆರೆದನೆಂದು ಇಬ್ಬರೂ ಬಗೆದುಕೊಂಡೆವು.

ಅದೇನೋ ರಿಕ್ರೂಟು ಎಂದು ಹೇಳಿದ—ಅಲ್ಲಿ ತನ್ನನ್ನು ಕೆಲಸಕ್ಕೆ ಸೇರಿಸಿಕೊಳ್ಳುವರೆಂದೂ, ಅಲ್ಲಿಗೆ ಹೋದರೆ, ಹೊಟ್ಟೆಬಟ್ಟೆಯಾಗಿ ಮೇಲೆ ಹಿಡಿತುಂಬ ಹಣಬರುವದೆಂದೂ, ಮುಂದೆ ಕೆಲವು ದಿನಗಳಲ್ಲಿ ತಾನು ಒಬ್ಬ ದೊಡ್ಡ ಹುದ್ದೇದಾರನಾಗಬಹುದೆಂದೂ, ಆಗ ನಾವಿಬ್ಬರು ಮದುವೆ ಮಾಡಿಕೊಂಡು ಸುಖದಿಂದ ಇದ್ದುಬಿಡಬಹುದೆಂದೂ ಆತನು, ಹೇಳಿದ. ಆತನಿದ್ದಲ್ಲಿಗೆ ಬಂದು ಆ ರಿಕ್ರೂಟಿನವರು ಕೇಳಿಕೊಂಡಿದ್ದರಂತೆ. ತಮ್ಮ ಕೆಲಸಕ್ಕೆಸೇರಲು ದುಂಬಾಲವೇ ಬಿದ್ದಿದ್ದರಂತೆ. ನಮ್ಮ ಪಾಲಿನ ದೇವರೇ ಒಂದಂತೆ ಅವರು ಒಂದರೆಂದು ನನಗೆನಿಸಿತು. ನಾನು ನನ್ನ ಮುಂದಿನ ಭಾಗ್ಯದ ಗಾಳಿಗೋಪುರಗಳನ್ನು ಕಟ್ಟಿಕೊಂಡು, ಅವುಗಳ ರಾಣಿಯಾಗಿ ಮೆರೆಯತೊಡಗಿದೆ.

ನನ್ನ ಒಪ್ಪಿಗೆಯ ಮೇರೆಗೆ ಆತನು ರಿಕ್ರೂತಿಗೆ ಹೆಬ್ಬೆರಳಿನ ಗುರುತು ಹಾಕಿಕೊಟ್ಟ. ಕೂಡಲೇ ಆತನಿಗೆ ಹೊಸ ಅಂಗಿಗಳು, ಕೆಲವೊಂದು ಹಣ, ಒಂದು ಪಾವಡ ಬಂದವು. ಮರುದಿನವೇ ಆತನು ಧಾರವಾಡಕ್ಕೆ ಹೋಗಬೇಕಾಯಿತು. ಹೋಗುವ ಮೊದಲು ಆತನು ನನ್ನಲ್ಲಿಗೆ ಬಂದು ತನ್ನಲ್ಲಿದ್ದ ಹಣವೆಲ್ಲವನ್ನೂ, ತಾನು ತಿರುಗಿ ಬಂದಾಗ ಬೇಕೆಂದು ಹೇಳಿ ನನ್ನಲ್ಲಿಟ್ಟು, ತನಗೆ ಹೊಸದಾಗಿ ಬಂದ ಉಡುಗರೆ ಯನ್ನು ಕೊಟ್ಟು, ತನ್ನ ದಾರಿಯನ್ನೇ ಕಾಯುತ್ತಿರಬೇಕಾಗಿ ಹೇಳಿ ಹೋದ.

ನಮ್ಮ ಊರಿಂದ ಮತ್ತೂ ಕೆಲವರು ರಿಕ್ರೂತಿಗೆ ಭರತಿ ಯಾಗಿದ್ದರು. ಎಲ್ಲರನ್ನೂ ಕರೆದುಕೊಂಡು ಹೋಗಲು, ಧಾರವಾಡ ದಿಂದ ಸ್ವತಃ ಒಬ್ಬ ಸಾಬನೇ ಮೋಟಾರು ತೆಗೆದುಕೊಂಡು ಬಂದಿದ್ದ. ಆ ಸಾಬನು ಆತನನ್ನು ಆದರದಿಂದ ಮಾತನಾಡಿಸಿದುದನ್ನೂ, ನಗು ನಗುತ್ತ ಆತನ ಬೆನ್ನು ಚಪ್ಪರಿಸುವದನ್ನೂ ನೋಡಿ, ನನಗೊಂದು ಪದವಿಯೇ ಬಂದಂತೆ ಎನಿಸಿತು. ಆತನು ಹೋದಮೇಲೆ ಹಿಂದೆ ನಿಂತು ನೋಡುತ್ತಿದ್ದ ನನ್ನ ಕಣ್ಣ ನೋಟ, ಸೂಜಿಯ ಮೊನೆಯಂತೆ ಚೂಪಾಗಿ, ಆ ಮೋಟಾರದ ಧೂಳಿಯೊಡಲನ್ನು ಸೀಳಿ, ಒಳಸೇರಿ, ಎಷ್ಟೋ ಹೊತ್ತಿನವರೆಗೆ ಆತನನ್ನೇ ದಿಟ್ಟಿಸುತ್ತಿತ್ತು.

೬

ಮುಂದೆ ಕೆಲವು ದಿನಗಳಲ್ಲೇ, ನಾನು ಹುಲ್ಲಬನ್ನಿಯಲ್ಲಿ ದನ ಗಳನ್ನು ಮೇಯಬಿಟ್ಟು, ನನ್ನಲ್ಲಿಯೇ ನಾನು ಮುಳುಗಿ ಕುಳಿತು ಕೊಂಡಾಗ, ಆತನು ಧಡಧಡನೆ ಬಂದು ನನ್ನೆದುರಿಗೆ ನಿಂತುಕೊಂಡ. ಸೋಲ್ಜರ ಡ್ರೇಸಿನಲ್ಲಿದ್ದ ಆತನನ್ನು ಗುರುತಿಸದೆ ಹೋದುದಲ್ಲದೆ,

ಮೊದಲು ತುಸು ಹೆದರಿಕೊಂಡೆ. ಆ ಮೇಲೆ ಆತನ ವಾಡಿಕೆಯ ಮುಗುಳುನಗೆಯು ಅರಳಿಬರಲು ನನ್ನ ಹೆದರಿಕೆಯೆಲ್ಲ ಓಡಿ ಹೋಯಿತು. ಆತನು ನನ್ನೊಡನೆ ಕುಳಿತು ತಾನು ಧಾರವಾಡದಲ್ಲಿ ಬಲು ಸುಖದಿಂದಿರುವದಾಗಿಯೂ, ತಾನು ಬಂದೂಕು ಹೊಡೆಯು ವದು, ಕುದುರೆಯೇರುವದು ಮುಂತಾದ್ದನ್ನು ಕಲಿಯುತ್ತಿರುವ ದಾಗಿಯೂ, ಸ್ವಂತ ಒಬ್ಬ ಆ ಸಾಬನ ಚಾಕರಿಯನ್ನೇ ಮಾಡುತ್ತಿ ರುವದಾಗಿಯೂ ಹೇಳಿದ. ಅದನ್ನೆಲ್ಲ ಕೇಳಿದ ನನ್ನ ಹುಬ್ಬುಗೆ ಕೋಡು ಮೂಡತೊಡಗಿದವು. ಆಗ ಅಂಥ ದೊಡ್ಡ ಕೆಲಸಕ್ಕೆ ಸೇರಿದ ಆತನ ಸಂಗಡ ಸರಿಕರಂತೆ ನಡೆದುಕೊಳ್ಳುವದು ನನ್ನ ಮರ್ಯಾದೆಗೆ ಮೀರಿದ ಮಾತೆಂದೆನಿಸಿತು. ಆತನು ಸಂಜೆಯವರೆಗೆ ನನ್ನೊಡನೆ ಇದ್ದು ತಾನು ಮಂಗಳವಾರ ದಿನ ಬೆಳಗಿನ ಗಾಡಿಯಿಂದ ಮುಂಬೈಗೆ ಹೋಗುವದಾಗಿಯೂ, ನಾನು ಆಗ ಗಾಡಿಯ ಹಳಿಯ ಮಗ್ಗಲಿಗೆ ಕೆರೆಯ ಕೋಡಿಯ ಕಟ್ಟೆಯ ಮೇಲೆ ನಿಂತು ತನ್ನನ್ನು ಕಾಯುತ್ತಿರ ಬೇಕಾಗಿಯೂ ಹೇಳಿ ಹೋದ.

ಆತನ ಹೇಳಿಕೆಯ ಮೇರೆಗೆ, ಮಂಗಳವಾರ ಇದ್ದಬಿದ್ದ ಕೆಲಸ ವನ್ನೆಲ್ಲ ಬಿಟ್ಟುಹೋಗಿ ಗಾಡಿಯ ದಾರಿಯನ್ನೇ ಕಾಯುತ್ತ ಎಷ್ಟೋ ಹೊತ್ತು ಕುಳಿತುಕೊಂಡೆ. ದೂರದಲ್ಲಿ ಗಾಡಿಯು ಬರುತ್ತಿರುವಾಗಲೇ ಅದರ ಸಪ್ಪಳದ ತಾಲದೊಡನೆ ನನ್ನೆದೆಯು ಬಲವಾಗಿ ಬಡಿದುಕೊಳ್ಳ ಹತ್ತಿತು. ಗಾಡಿಯು ಹತ್ತರ ಬಂದೊಡನೆ ನಾನು ತುದಿಗಾಲೂರಿ ಎದ್ದುನಿಂತು, ಕಣ್ಣುಗಳನ್ನು ಹಿಗ್ಗಿಸಿ, ಚಾಚಿ ಚಾಚಿ, ಆತನನ್ನು ನೋಡತೊಡಗಿದೆ. ಗಾಡಿಯ ಕಿಡಿಕಿಗಳಲ್ಲಿ ಬೇರೆ ಹಲವರಿದ್ದರೂ ನನಗೊಬ್ಬರೂ ಕಾಣಿಸದೆ ಹೋದರು.

ಆತನನ್ನು ದೂರದಿಂದಲೇ ನೋಡಿದೆ. ನನಗಾಗಿಯೇ ಆತನು ಸಾಧ್ಯವಾದ ಮಟ್ಟಿಗೆ ತನ್ನ ಮೈಯನ್ನು ಕಿಡಿಕಿಯ ಹೊರಗೆ ನೀಡಿಕೊಂಡು ನಿಂತಿದ್ದ. ಗಾಡಿಯು ಹೋಗಹೋಗುತ್ತಿರುವಂತೆ ಆತನು ಕೈಮಾಡಿ ಮಾಡಿ ನನಗೆ ಸನ್ನೆ ಹೇಳುತ್ತಿದ್ದ. ಗಾಡಿ ಒಂದು ನಿಮಿಷದಲ್ಲಿ ಕಂಚುಮಿಂಚಾಯಿತು. ಆದರೂ ನಾವಿಬ್ಬರೇ ಎಷ್ಟೋ ಹೊತ್ತು ಒಬ್ಬರನ್ನೊಬ್ಬರು ನೋಡುತ್ತ ನಿಂತಂತೆ ಎನಿಸಿತು. ಗಾಡಿಯು ದೂರದಲ್ಲಿ ಮರೆಯಾಗುತ್ತ ಒಂದು ಸಾಸಿವೆಕಾಳಷ್ಟು ಆಗುವವರೆಗೂ ನಿಂತು ನೋಡಿದೆ. ಆ ಕೆಲವು ದಿನ, ಪ್ರತಿಯೊಂದು ನಿಮಿಷವೂ, ಒಂದೊಂದು ಗಾಡಿ ಒಂದಂತೆ, ಅದರಲ್ಲಿ ಆತನು ಹೊರಗೆ ಬಗ್ಗಿ ನಿಂತಂತೆ, ನನ್ನನ್ನು ಕೈಮಾಡಿ ಮಾಡಿ ಕರೆಯುತ್ತಿರುವಂತೆ ಭಾಸವಾಗುತ್ತಿತ್ತು.

೧೦

ಆ ಮಾತಿಗೆ ಇಂದಿಗೆ ಎಷ್ಟೋ ವರ್ಷಗಳಾದವು. ಆತನು ಹೋದವನು ಹಿಂದಿರುಗಿಲ್ಲ. ನಾನು ಬೆಳೆದು ದೊಡ್ಡವಳಾದ ಮೇಲೆ ತಾಯಿಯ ಬಲುಮೆಗಾಗಿ, ಪರಿಸ್ಥಿತಿಯ ಒಲುಮೆಗಾಗಿ ಹೊತ್ತಿನ ಒತ್ತಾಯಕ್ಕಾಗಿ, ಒತ್ತಟ್ಟಿಗೆ ಮದುವೆ ಮಾಡಿಕೊಂಡೆ. ನನಗೀಗ ನಗುತ್ತಿನಂಥ ಮೂರು ಮಕ್ಕಳೂ ಸಹ ಇವೆ. ಆತನು ರಿಕ್ರೂಟು ಸೇರಿ ಹೋದ ಮೇಲೆ ಹಲವು ವರುಷ ನನ್ನೆದೆಯ ಹಂಬಲವೂ, ಜೀವದ ಕಳವಳವೂ, ಮನಸಿನ ಹಟವೂ ಹಿಮ್ಮೆಟ್ಟಲೆ ಇಲ್ಲ. ಆ ಕಳವಳವನ್ನು ನಾನು ತಡೆಯದೆ ಹೋದೆ. ಏನೋ ಹುಚ್ಚು! ಮದುವೆ ಮಾಡಿಕೊಂಡರೆ ಆ ಕನವಿಸಿಯೆಲ್ಲ ಕಳೆದು ಹೋಗಬಹುದೆಂದು ನನಗೂ ಒಮ್ಮೆ ತೋರಿತು.

ನನ್ನ ಪುಣ್ಯದ ಮಾತೆಂದರೆ ನನ್ನ ಗಂಡನ ಕೆಲಸ ಗಾಡಿಯು ಹಳಿಗಳ ರೇಲನ್ನು ಕಾಯುವದು. ಕಂಬಾರಗಣಿವೆಯ ಗುಡ್ಡದೋರೆಯ ಮಗ್ಗುಲಲ್ಲಿ ಗಾಡಿಯು ಇಳಿದು ಬರುತ್ತಿರುವಲ್ಲಿಯೇ, ನಮ್ಮ ಗೇಟು, ಹಾಗು ಅದಕ್ಕೆ ಹೊಂದಿದ ನಮ್ಮ ಗಚ್ಚಿನ ಗುಡಿಸಲು. ನಾವು ಗಂಡ-ಹೆಂಡಿರು ಮಕ್ಕಳುಮರಿಗಳೆಲ್ಲ ಅಲ್ಲಿ ಸುಖವಾಗಿದ್ದೇವೆ.

ಆದರೆ ನಾನು ಮೊದಲು ಬಗೆದಂತೆ, ನನ್ನೆದೆಯ ಚಡಪಡಿಕೆಯು ಸರಿಯಲೇ ಇಲ್ಲ. ಇಂದಿಗೂ ಆ ಹಿಂದಿನ ನೆನಪು ನನ್ನನ್ನು ಹರಿದು ತಿನ್ನುತ್ತಿರುವಂತೆ ಎನಿಸುತ್ತದೆ. ನನ್ನ ಹೃದಯ, ನಮ್ಮ ಸಂಸಾರದ ಸುಖದಿಂದ ತಣಿವುಗೊಳ್ಳದಾಗಿದೆ. ಏನೋ ಸ್ವಲ್ಪ ಮೈತುಂಬ ಕೆಲಸ ಇದ್ದರೆ ಆ ಸಂತಾಪದ ಮರೆವು. ಆದರೆ ನನಗೆ ಕೆಲಸಕ್ಕಿಂತ ಬಿಡುವೇ ಹೆಚ್ಚು. ಮಹಾರಾಯನಂಥ ಗಂಡ ಪ್ರೀತಿಯಿಂದ ದುಡಿದು ಹಾಕುತ್ತಾನೆ. ಆದುದರಿಂದ ನಾನು ಕಾಲುಚಾಚಿ ಕುಳಿತುಕೊಂಡು,ಹಿಂದಣ ನೆನಪಿನ ಕಣ್ಣುಮುಚ್ಚಾಟಿಕೆಯನ್ನೇ ಬಗೆಯುತ್ತ ಕುಳಿತುಕೊಳ್ಳುವೆ.

ಮೇಲು ಗಾಡಿಗೆ ಸಿಗ್ನೇಲು ಕೊಟ್ಟನೆಂದರೆ, ನನ್ನ ಗಂಡ ಕಟ್ಟಿಗೆ ಕೂಡಿಸಲು ಹೊರಟು ಹೋಗುತ್ತಾನೆ. ಉಳಿದ ಎಲ್ಲ ಗಾಡಿಗಳನ್ನೂ ನಾನೇ ನೋಡಿಕೊಳ್ಳುತ್ತೇನೆ. ಆ ಕೆಲಸದಲ್ಲಿ ನನಗೆ ಬಳ್ಳೇ ಪ್ರೀತಿ. ಹಗಲು ಹನ್ನೆರಡು ತಾಸೂ, ಗಾಡಿಗಳು ಬರುಹೋಗುವದನ್ನೇ ನೋಡುತ್ತ ಕುಳ್ಳಿರಬೇಕೆಂದೆನಿಸುವದು.

ರಿಕ್ರೋತಿಗೆ ಹೋದವರಲ್ಲಿ ಹಲವರು ದುಡ್ಡು ದುಗ್ಗಾಣಿ ಗಳಿಸಿಕೊಂಡು ಹಿಂದಿರುಗಿ ಬಂದಿರುವರೆಂದು ಕೇಳಿದ್ದೇನೆ. ಆದರೆ ನನ್ನ ಆತನು ಇನ್ನೂ ಬರಲಿಲ್ಲ. ಎಂದಾದರೂ ಬಂದಾನೇ ಎಂದು ನನ್ನ ಹಂಬಲ ಹಾತೊರೆಯುತ್ತಿದೆ. ಜೀವ ಆಲ್ಪರಿಯುತ್ತದೆ. ಆದ

ಕ್ಕಾಗಿ ನಾನು ಪ್ರತಿಯೊಂದು ಗಾಡಿಯನ್ನೂ ತಪ್ಪದೆ ಕಾಯುತ್ತ ಕುಳಿತುಕೊಳ್ಳುತ್ತೇನೆ. ಇತ್ತೀಚೆ, ಹೋಗಬರುವ ಗಾಡಿಗಳಲ್ಲೆಲ್ಲ, ಯಾವದೋ ಒಂದು ತೆರವುಕಿಡಿಕಿಯೊಳಗಿಂದ, ಆತನು ಹಣಿಕಿಯಿಕ್ಕಿಯಿಕ್ಕಿ ನನ್ನನ್ನು ಕೈಮಾಡಿ ಮಾಡಿ ಕರೆಯುತ್ತಿರುವಂತೆ ಎನಿಸುವದು. ಗಾಡಿಗಳು ಹೋದಮೇಲೆ ಹಿಂದೆ ಗಾಳಿಯಲ್ಲಿ ನೀಳವಾಗಿ ಹಬ್ಬಿಕೊಂಡ ಹೊಗೆಯ ಸೆರಗಿನಲ್ಲಿ ಆತನ ಚಾಚಿದ ಕೈಯೇ ಮೂಡಿದಂತೆ ಕಾಣುವದು. ಒಮ್ಮೊಮ್ಮೆಯಂತೂ, ಗಾಡಿಯ ಕಿಡಿಕಿಗಳಲ್ಲಿ ಮೋರೆಯಿಟ್ಟುಕೊಂಡು ಕುಳಿತ ಪ್ರತಿಯೊಬ್ಬ ಗಂಡಸಿನ ಮೋರೆಯೂ ನನಗೆ ಆತನ ಮೋರೆಯೆಂದೇ ಎನಿಸುವದು. ನಾನು ಹುಚ್ಚಿಯಂತೆ ಕುಳಿತುದನ್ನು ಕಂಡು, ಗಾಡಿಯೊಳಗಿನ ಮಕ್ಕಳು ಕೈಮಾಡಿ ಕೂಗುವಾಗ ಆತನೇ ನನ್ನನ್ನು ಕರೆಯುತ್ತಿರಬಹುದಲ್ಲವೇ ಎನಿಸುವದು. ಗೂಡ್ಸು ಗಾಡಿಗಳು ಹಾಯುವಾಗಲೂ ಆ ಡಬ್ಬಿಗಳಲ್ಲೂ ಒಂದು ಕಿಡಿಕಿ, ಅದರಲ್ಲಿ ಒಂದು ಮೋರೆ, ಅದರ ಮುಂದೆ ಒಂದು ಕೈ ಇದ್ದಂತೆ ಭಾಸವಾಗುವದು. ರಾತ್ರಿಯಲ್ಲಿ ಗಂಡಮಕ್ಕಳ ನಡುವೆ ಮಲಗಿಕೊಂಡಾಗಲೂ, ಯಾವದೋ ಒಂದು ಗಾಡಿಯು ಹಾದ್ಹೋಗುತ್ತಿರುವಂತೆ ಎನಿಸಿ ನನ್ನೆದೆಯು ಡಬಡಬ ಎಂದುಕೊಳ್ಳುವದು. ಆಗ, ನಾನು ಹೊರಗೆ ಕಾಯುತ್ತ ಕುಳಿತಿಲ್ಲವಲ್ಲ; ಆತನು ನನಗಂದು ಕೈ ಮೈ ಕಣ್ಣುಗಳನ್ನು ಚಾಚಿ ಕುಳಿತಾಗ ನನ್ನನ್ನು ಕಾಣದೆ ಆತನು ಎಷ್ಟು ಆಸೆಗೆಡಬಹುದು ಎಂದು ನಿದ್ದೆಕನಸಿನಲ್ಲಿಯೂ ಕನವರಿಕೆಯಾಗುವದು.

ನನ್ನ ಗಂಡನೆಂದರೆ ನನಗೊಂದು ಮೆಚ್ಚು. ಏತಕೆಂದರೆ ಇತ್ತೀಚೆ ನನ್ನ ಗಂಡನೂ ಆತನಂತೆ ಕಾಣುತ್ತಿರುವ. ರಿಕ್ರೂತು

ಸೇರುವಾಗ ಆತನಿಡೆ ಬಂದ ಉಡುಗರೆಯನ್ನು ನಾನು ಮೊನ್ನಿನವರೆಗೆ ಬಳಸದೆ ಕಾಯ್ದು ಇಟ್ಟಿದ್ದೆ. ನಾಣಸೋಮವಾರ ಆದೇಕೋ ಆ ಒಟ್ಟೆಗಳನ್ನು ತೆಗೆದು ನನ್ನ ಗಂಡನಿಗೆ ಕೊಟ್ಟೆ. ನನ್ನ ಗಂಡನು ಅವು ಗಳನ್ನು ತೊಟ್ಟುಕೊಂಡು ನಿಂತರೆ, ಅಂದು ರಿಕ್ರೂತಿಗೆ ಸಹಿ ಹಾಕಿದ ದಿನ 'ಆತ'ನು ನನ್ನೆದುರಿಗೆ ನಿಂದಂತೆಯೆ ಎನಿಸಿತು.

ಹೀಗೆ ನನಗೆ ಎಲ್ಲೆಲ್ಲಿಯೂ ಆತನೇ ಕಾಣುತ್ತಿದ್ದಾನೆ. ಇದ ರಿಂದ ನನ್ನ ಪ್ರೀತಿಯು ಈ ನೆಲಮುಗಿಲುಗಳಷ್ಟು ಅಗಲವಾಗಿ ಬಿಡ ಬಹುದಲ್ಲವೆ! ಆತನು ಇನ್ನೆಂದೂ ಬರಲಿಕ್ಕೇ ಇಲ್ಲ. ಆದರೆ ನನ ಗೇನು ನನ್ನ ಜೀವನವು ಬೇಸರವೆನಿಸದು. ಜೀವದ ನೋವೂ ಬೇಡ ವೆನಿಸದು. ಆತನಿಗಾಗಿ ನನ್ನ ಹಂಬಲವೂ ಹೆಚ್ಚುತ್ತಿರುವದು. ಹೀಗೇ ಇದ್ದರೆ ನನ್ನ ಬಾಳೂ ಈ ಜಗತ್ತೂ ಮುಗಿಯದೆ ಇರಲಿ. ತಮ್ಮ ನಿಟ್ಟರಿಯದೇ ಓಡುವ ಈ ಗಾಡಿಗಳಂತೇ ನನ್ನ ಜೀವನವೂ ಹರಿಯುತ್ತಿರಲಿ. ಎಷ್ಟು ಜನ್ಮಜನ್ಮಗಳಾದರೂ, ನನಗೆ ಯಾವು ದಾದರೊಂದು ಗೇಟಿನ ಬಳಿ ಕುಳಿತು ಹೀಗೇ ಗಾಡಿಗಳನ್ನು ಕಾಯುತ್ತ ನಿರಂತರವಾಗಿ ಇದ್ದುಬಿಡಬೇಕೆನಿಸುವದು. ಈ ನನ್ನ ಹುಚ್ಚಿನಿಂದ ನನ್ನ ಜೀವನವೆಂದಿಗೂ ಬಿಡುಗಡೆ ಹೊಂದದಿರಲಿ.

